ಅರಿಮೆಯ ಚುಟುಕು ಕಡತಗಳು-3

# ಕನ್ನಡಕ್ಕೆ ಮಹಾಪ್ರಾಣ ಯಾಕೆ ಬೇಡ?

ಡಿ. ಎನ್. ಶಂಕರ ಬಟ್

ಅರಿಮೆಯ ಚುಟುಕು ಕಡತಗಳು–೩

# ಕನ್ನಡಕ್ಕೆ ಮಹಾಪ್ರಾಣ ಯಾಕೆ ಬೇಡ?

ಡಿ. ಎನ್. ಶಂಕರ ಬಟ್

KANNADADAKKE MAHAPRANA YAKE BEDA? (Why Kannada does not need aspirated stops?) by D.N.Shankara Bhat, P.O. B.Manchale, Via Tyagarti, Sagara 577431. Phone: 08183-204123. E-mail: bhatdns@gmail.com

ಮೊದಲನೆಯ ಅಚ್ಚು: ೨೦೧೭



**ಹೊರಪಡಿಕೆ:**
ಡಿ. ಎನ್. ಶಂಕರ ಬಟ್.
ಅಂಚೆ: ಬಿ. ಮಂಚಾಲೆ,
ಸಾಗರ, ಶಿವಮೊಗ್ಗ ೫೭೭ ೪೩೧.

**ಹಂಚಿಕೆ:**
ನವಕರ್ನಾಟಕ ಪ್ರಕಾಶನ,
೧೧, ಕ್ರೆಸೆಂಟ್ ರಸ್ತೆ, ಕೆ.ಪಿ.ಈಸ್ಟ್,
ಬೆಂಗಳೂರು ೫೬೦ ೦೦೧

**ಹೊದಿಕೆ:** ವಲ್ಲೀಶ್ ಕುಮಾರ್ ಎಸ್

**ಅಚ್ಚು:**
**ಪೂರ್ಣಮುದ್ರ**
೨೬೮೬, ೧೭ನೇ ಡಿ ಕ್ರಾಸ್, ಬಿ.ಎಸ್.ಕೆ.೨ನೇ ಹಂತ
ಬೆಂಗಳೂರು - ೫೬೦ ೦೭೦.

# ಮುನ್ನುಡಿ

ಕನ್ನಡಕ್ಕೆ ಮಹಾಪ್ರಾಣ ಬರಿಗೆ(ಅಕ್ಶರ)ಗಳು ಮತ್ತು ಷ, ಋ, ವಿಸರ್ಗ ಮೊದಲಾದ ಬೇರೆಯೂ ಕೆಲವು ಬರಿಗೆಗಳು ಬೇಕಾಗಿಲ್ಲ ಎಂಬುದಾಗಿ ನಾನು ನನ್ನ ಕನ್ನಡ ಬರಹವನ್ನು ಸರಿಪಡಿಸೋಣ ಎಂಬ ಪುಸ್ತಕದಲ್ಲಿ ತೋರಿಸಿಕೊಟ್ಟಿದ್ದೆ. ಕನ್ನಡದವೇ ಆದ ಪದಗಳನ್ನು ಬರೆಯಲು ಬರಿಯ ೩೧ ಬರಿಗೆಗಳು ಸಾಕಾಗುತ್ತವೆ.

ಸುಮಾರು ಒಂದೂವರೆ ಸಾವಿರ ವರ್ಶಗಳಶ್ಟು ಹಿಂದೆ, ಕನ್ನಡಕ್ಕೆ ಅದರದೇ ಆದ ಬರವಣಿಗೆಯನ್ನು ಹೊಂದಿಸಿಕೊಳ್ಳುವ ಸಮಯದಲ್ಲಿ ಕನ್ನಡ ಪಂಡಿತರು ಈ ಹೆಚ್ಚಿನ ಬರಿಗೆಗಳನ್ನು ಅದರಲ್ಲಿ ಉಳಿಸಿಕೊಂಡಿದ್ದರು. ಇದಕ್ಕೆ ಕಾರಣವೇನೆಂದರೆ, ಸಂಸ್ಕ್ರುತದ ಎರವಲು ಪದಗಳನ್ನು ಸಂಸ್ಕ್ರುತದಲ್ಲಿರುವ ಹಾಗೆಯೇ ಬರೆಯಬೇಕೆಂಬ ಅನಿಸಿಕೆ ಅವರಿಗಿತ್ತು. ಅವರ ಈ ತೀರ್ಮಾನ ಇವತ್ತಿನ ವರೆಗೂ ಕನ್ನಡ ಬರವಣಿಗೆಯಲ್ಲಿ ಈ ಹೆಚ್ಚಿನ ಬರಿಗೆಗಳನ್ನು ಉಳಿಸಿಕೊಂಡು ಬಂದಿದೆ.

ಆದರೆ, ಇವತ್ತು ಕನ್ನಡ ಬರಹ ಎಲ್ಲಾ ಕನ್ನಡಿಗರನ್ನೂ ತಲಪಬೇಕಾಗಿದೆ, ಮತ್ತು ಹೀಗೆ ತಲಪಿಸುವ ಕೆಲಸದಲ್ಲಿ ಈ ಹೆಚ್ಚಿನ ಬರಿಗೆಗಳು ತೊಡಕಾಗಿವೆ. ಹಾಗಾಗಿ, ಕನ್ನಡದ ಮಟ್ಟಿಗೆ ಅನವಶ್ಯಕವಾಗಿರುವ ಅವನ್ನು ಬಿಟ್ಟುಕೊಟ್ಟು, ಕೆಳವರ್ಗದ ಕನ್ನಡಿಗರಿಗೆ ಸಾಮಾಜಿಕ ನ್ಯಾಯ ದೊರಕುವಂತೆ ನಾವು ಇವತ್ತು ಮಾಡಲೇಬೇಕಾಗಿದೆ.

ಈ ಅನವಶ್ಯಕವಾದ ಬರಿಗೆಗಳ ಬಳಕೆ ಹೇಗೆ ಒಂದು ಸಾಮಾಜಿಕ ಅನ್ಯಾಯವಾಗುತ್ತದೆ, ಹೇಗೆ ಅದು ಬೇರೆ ಮಕ್ಕಳ ಕಲಿಕೆಯಲ್ಲಿ ಮತ್ತು ಕನ್ನಡ ಬರಹದ ಬಳಕೆಯಲ್ಲಿ ಒಂದು ತೊಡಕಾಗಿದೆ, ಮತ್ತು ಹೇಗೆ ಅದನ್ನು ಸುಲಬವಾಗಿ ಹೋಗಲಾಡಿಸಲು ಬರುತ್ತದೆ ಎಂಬುದನ್ನು ಈ ಪುಸ್ತಕದಲ್ಲಿ ವಿವರಿಸಿದ್ದೇನೆ.

ಕನ್ನಡ ಬರಹವನ್ನು ಸರಿಪಡಿಸೋಣ ಎಂಬ ಪುಸ್ತಕದಲ್ಲಿ ಮತ್ತು ಮಾತು ಮತ್ತು ಬರಹದ ನಡುವಿನ ಗೊಂದಲ ಎಂಬ ಇನ್ನೊಂದು ಪುಸ್ತಕದಲ್ಲಿ ಈ ವಿಶಯದ ಕುರಿತಾಗಿ ಬರೆದಿದ್ದೆ. ಅಲ್ಲಿ ಬರೆದುದನ್ನೆಲ್ಲ ಒಟ್ಟುಸೇರಿಸಿ, ಮತ್ತು ಅದಕ್ಕೆ ಕೆಲವು ಹೆಚ್ಚಿನ ತಿಳಿವನ್ನೂ ಸೇರಿಸಿ ಈ ಚುಟುಕು ಕಡತವನ್ನು ಉಂಟುಮಾಡಲಾಗಿದೆ.

ಈ ಪುಸ್ತಕವನ್ನು ಬರೆಯುವಲ್ಲಿ ನನಗೆ ನೆರವನ್ನು ನೀಡಿದ ಮಡದಿ ಬಾರತಿ ಬಟ್ ಅವರನ್ನು, ಈ ಪುಸ್ತಕಕ್ಕೆ ಅಂದವಾದ ಹೊದಿಕೆಯನ್ನು ಮಾಡಿಕೊಟ್ಟ ವಲ್ಲೀಶ್ ಕುಮಾರ್, ಎಸ್. ಅವರನ್ನು, ಇದನ್ನು ಅಂದವಾಗಿ ಅಚ್ಚುಹಾಕಿಸಿಕೊಟ್ಟ ಪೂರ್ಣಮುದ್ರ ಮಾಲೀಕರಾದ ಎಂ.ಜಿ.ನಟರಾಜ ಅವರನ್ನು, ಮತ್ತು ಇದರ ಮಾರಾಟದ ಹೊಣೆ ಹೊತ್ತಿರುವ ನವಕರ್ನಾಟಕ ಪ್ರಕಾಶನದ ಎ. ರಮೇಶ್ ಉಡುಪ ಅವರನ್ನು ನಾನು ಇಲ್ಲಿ ನೆನಪಿಸಬಯಸುತ್ತೇನೆ.

ಬಿ. ಮಂಚಾಲೆ<br>ಮೇ ೧, ೨೦೧೭

ಡಿ.ಎನ್. ಶಂಕರ ಬಟ್

# ಒಳಪಿಡಿ

# ೧. ಮುನ್ನೋಟ

## ೧.೧ ಕನ್ನಡ ಬರಹದಲ್ಲಿ ಬೇಡದಿರುವ ಬರಿಗೆಗಳು

ಇವತ್ತು ಬಳಕೆಯಲ್ಲಿರುವ ಮಹಾಪ್ರಾಣ ಬರಿಗೆ(ಅಕ್ಶರ)ಗಳು, ಷಕಾರ, ಋಕಾರ ಮೊದಲಾದ ಸುಮಾರು ಹತ್ತಿಪ್ಪತ್ತು ಬರಿಗೆಗಳು ನಿಜಕ್ಕೂ ಕನ್ನಡ ಬರಹಕ್ಕೆ ಬೇಕಾಗಿಲ್ಲ. ಇಂತಹ ಬೇಡದಿರುವ ಬರಿಗೆಗಳನ್ನು ಬರಹದಿಂದ ತೆಗೆದು ಹಾಕಿ, ಕನ್ನಡ ಬರಹವನ್ನು ಕಲಿಯುವ ಮತ್ತು ಬಳಸುವ ಕೆಲಸ ತುಂಬಾ ಸುಲಬವಾಗುವ ಹಾಗೆ ಇವತ್ತು ಮಾಡಲೇಬೇಕಾಗಿದೆ. ಯಾಕೆಂದರೆ, ಕನ್ನಡ ಬರಹವನ್ನು ಎಲ್ಲಾ ವರ‍್ಗದ ಜನರೂ ಬಳಸುವ ಹಾಗೆ ಮಾಡುವಲ್ಲಿ ಈ ಬರಿಗೆಗಳು ತೊಡಕುಗಳಾಗಿವೆ.

ಸುಮಾರು ಎರಡು ಸಾವಿರ ವರ‍್ಶಗಳಶ್ಟು ಹಿಂದೆ, ಕನ್ನಡಕ್ಕೆ ಬರಹವೊಂದನ್ನು ಅಳವಡಿಸುವ ಸಮಯದಲ್ಲಿ ಕನ್ನಡದ ತಿಳಿವಿಗರು ಸಂಸ್ಕ್ರುತದ ಮೇಲಿದ್ದ ಮೇಲರಿಮೆಯಿಂದಾಗಿ ಕನ್ನಡ ಬರಹಕ್ಕೆ ಬೇಡದಿದ್ದರೂ ಸಂಸ್ಕ್ರುತ ಪದಗಳನ್ನು ಅದರಲ್ಲಿದ್ದಂತೆ ಬರೆಯಲು ಬೇಕಾಗುತ್ತದೆಯೆಂದು ಈ ಬರಿಗೆಗಳನ್ನು ತಮ್ಮ ಕನ್ನಡ ಬರಹಗಳಲ್ಲಿ ಬಳಸಲು ತೊಡಗಿದ್ದರು. ಮುಂದಿನವರೂ ಇದನ್ನೇ ಮುಂದುವರಿಸುತ್ತಾ ಬಂದಿದ್ದು, ಇವತ್ತಿಗೂ ಅದೇ ಬಳಕೆ ನಡೆಯುತ್ತಿದೆ.

ಸಂಸ್ಕ್ರುತದ ಮೇಲಿರುವ ಈ ಮೇಲರಿಮೆಯನ್ನು ಮತ್ತು ಕನ್ನಡದ ಕುರಿತಾಗಿರುವ ಕೀಳರಿಮೆಯನ್ನು ನಾವು ಇವತ್ತು

ತೊರೆಯಬೇಕಾಗಿದೆ. ನಮ್ಮ ಮಟ್ಟಿಗೆ ನಮ್ಮ ನಾಡಿನ ನುಡಿಯಾಗಿರುವ ಕನ್ನಡವೇ ಬೇರೆ ಎಲ್ಲಾ ನುಡಿಗಳಿಗಿಂತಲೂ ಮೇಲಿನ ನುಡಿಯಾಗಿರಬೇಕು, ಮತ್ತು ಹಿಂದಿ, ಇಂಗ್ಲಿಶ್, ಮರಾಟಿ ಮೊದಲಾದ ಬೇರೆ ನುಡಿಗಳ ಹಾಗೆ, ಸಂಸ್ಕ್ರುತವೂ ಒಂದು ಹೊರಗಿನ ನುಡಿಯಶ್ಟೇ ಆಗಿರಬೇಕು. ಅದರಿಂದ ಪಡೆದ ಪದಗಳನ್ನು ಇಂಗ್ಲಿಶ್, ಹಿಂದಿ ಮೊದಲಾದವುಗಳಿಂದ ಪಡೆದ ಪದಗಳ ಹಾಗೆ ಎರವಲು ಪದಗಳೆಂದಶ್ಟೇ ತಿಳಿಯಬೇಕು.

ಇಂತಹ ಎರವಲು ಪದಗಳನ್ನು ನಾವು ಸಾಮಾನ್ಯವಾಗಿ ಹೇಗೆ ಉಲಿಯು(ಉಚ್ಚರಿಸು)ತ್ತೇವೋ ಹಾಗೆಯೇ ಬರೆಯುತ್ತೇವೆ. ಇಂಗ್ಲಿಶ್‌ನಲ್ಲಿ ವ್ಹೋಟ್ ಎಂಬ ಪದದ ಮೊದಲಿಗೆ ಬರುವ ವಕಾರಕ್ಕೂ ವಾಚ್ ಎಂಬ ಇನ್ನೊಂದು ಪದದ ಮೊದಲಿಗೆ ಬರುವ ವಕಾರಕ್ಕೂ ನಡುವೆ ಇಂಗ್ಲಿಶ್ ನುಡಿಗರ ಉಲಿಪಿನಲ್ಲಿ (ಉಚ್ಚಾರಣೆಯಲ್ಲಿ) ಬೇರ್ಮೆ ಇದೆ. ಆದರೆ, ಕನ್ನಡದ ಮಾತುಗಳಲ್ಲಿ ಬಳಸುವಾಗ ಇವೆರಡನ್ನೂ ಒಂದೇ ಬಗೆಯಲ್ಲಿ ಉಲಿಯುತ್ತೇವೆ. ಹಾಗಾಗಿ, ಅವೆರಡನ್ನೂ ಒಂದೇ ಬಗೆಯಲ್ಲಿ ಬರೆಯುತ್ತೇವೆ.

ಇದೇ ರೀತಿಯಲ್ಲಿ, ಸಂಸ್ಕ್ರುತದಿಂದ ಎರವಲಾಗಿ ಪಡೆದ ಪದಗಳಲ್ಲಿ ಕಾಣಿಸುವ ಮಹಾಪ್ರಾಣ ಬರಿಗೆಗಳನ್ನು ಹೆಚ್ಚಿನ ಕನ್ನಡಿಗರೂ ಅಲ್ಪಪ್ರಾಣಗಳಾಗಿಯೇ ಉಲಿಯುತ್ತಾರೆ. ಹಾಗಾಗಿ, ಅವನ್ನೂ ಅಲ್ಪಪ್ರಾಣ ಬರಿಗೆಗಳಾಗಿ ಬರೆದರೆ ಸಾಕು, ಮಹಾಪ್ರಾಣ ಬರಿಗೆಗಳಾಗಿ ಬರೆಯಬೇಕಾಗಿಲ್ಲ; ಹಾಗೆ ಬರೆಯದಿರುವುದೇ ಕನ್ನಡದ ಮಟ್ಟಿಗೆ ಸರಿಯಾದ ದಾರಿ. ಹೀಗೆ ಮಾಡುವುದರಿಂದ, ಕನ್ನಡದ ಬರವಣಿಗೆಯಲ್ಲಿ ಅನವಶ್ಯಕವಾಗಿ ಸೇರಿಕೊಂಡಿರುವ ಖ, ಘ, ಭ, ಝ ಮೊದಲಾದ ಹತ್ತು ಹೆಚ್ಚಿನ ಬರಿಗೆಗಳನ್ನು ಬಿಟ್ಟುಕೊಡಲು ಬರುತ್ತದೆ.

ಇದೇ ರೀತಿಯಲ್ಲಿ ಋ, ಷ, ವಿಸರ್‍ಗ ಮೊದಲಾದ ಬೇರೆಯೂ ಕೆಲವು ಬರಿಗೆಗಳು ಕನ್ನಡಕ್ಕೆ ಬೇಕಾಗುವುದಿಲ್ಲ. ಅವನ್ನು ಬಳಸಿರುವ ಪದಗಳನ್ನು ಬೇರೆ ಎರವಲು ಪದಗಳ ಹಾಗೆ ಉಲಿಯುವಂತೆ ಬರೆಯಹೊರಟಲ್ಲಿ ಅವನ್ನೂ ಬಳಸದಿರಲು ಬರುತ್ತದೆ.

## ೧.೨ ಓದುವ ಮತ್ತು ಬರೆಯುವ ಅಳವು

ಕನ್ನಡದಲ್ಲಿ ಓದುವ ಮತ್ತು ಬರೆಯುವ ಅಳವನ್ನು (ಸಾಮರ್‍ತ್ಯವನ್ನು) ಇವತ್ತು ಎಲ್ಲಾ ಕನ್ನಡಿಗರೂ ಪಡೆಯುವಂತಾಗಬೇಕಾಗಿದೆ. ನಮ್ಮ ನಾಡಿನ ಏಳಿಗೆಗೆ ಇದು ತುಂಬಾ ಅವಶ್ಯವಾಗಿ ನಡೆಯಬೇಕಾಗಿರುವ ಮಾರ್‍ಪಾಡು. ಬರಹಗಳನ್ನು ಓದಿ ಅವು ಕೊಡುವ ತಿಳಿವನ್ನು ಪಡೆಯಲಾಗದ ಮಂದಿ ಹೆಚ್ಚಿನ ತಿಳಿವಿನಿಂದಲೂ ದೂರ ಉಳಿಯುತ್ತಾರೆ, ಮತ್ತು ಬರೆದು ತಿಳಿಸುವ ಅಳವನ್ನು ಪಡೆಯದಿರುವವರು ತಮ್ಮ ಅನಿಸಿಕೆಗಳನ್ನು ಬೇರೆಯವರಿಗೆ ತಿಳಿಸುವಲ್ಲಿ ಹಿಂದೆ ಬೀಳುತ್ತಾರೆ.

ಮೊನ್ನೆ ಮೊನ್ನೆಯ ವರೆಗೂ ಕನ್ನಡ ಬರಹ ಕೆಲವೇ ಕೆಲವು ಮಂದಿ ಮೇಲ್ವರ್‍ಗದ ಜನರ ಬಳಕೆಯಲ್ಲಿತ್ತು. ನಡುವರ್‍ಗದವರು ಅದನ್ನು ಬಳಸತೊಡಗಿ ಇನ್ನೂ ಹೆಚ್ಚು ಸಮಯವಾಗಿಲ್ಲ. ಆದರೆ, ಕೆಳವರ್‍ಗದ ಮಂದಿ ಇವತ್ತಿಗೂ ಬರಹದ ಬಳಕೆಯಿಂದ ದೂರವೇ ಉಳಿದಿದ್ದಾರೆ. ಅವರಲ್ಲಿ ಕೆಲವರು ಶಾಲೆಗೆ ಹೋಗಿ ಓದಲು-ಬರೆಯಲು ಕಲಿಯುತ್ತಾರಾದರೂ, ತಮ್ಮ ಜೀವನದಲ್ಲಿ ಈ ಓದು-ಬರಹವನ್ನು ಬಳಕೆಗೆ ತರುವವರ ಎಣಿಕೆ ಈ ವರ್‍ಗದವರಲ್ಲಿ ತುಂಬಾ ಕಡಿಮೆ.

ಈ ಪರಿಸ್ತಿತಿಯನ್ನು ಇವತ್ತು, ಅದರಲ್ಲೂ ಈ ಕೂಡುಬಲೆಯ (ಇಂಟರ್‌ನೆಟ್‌ನ) ಯುಗದಲ್ಲಿ, ಮಾರ್‍ಪಡಿಸಲೇಬೇಕಾಗಿದೆ.

ಇಲ್ಲವಾದರೆ, ಕನ್ನಡ ಸಮಾಜ ಮುಂದೆ ಬರಲಾರದು. ಯಾಕೆಂದರೆ, ಬರಹಬಾರದವರು ಆಲೋಚಿಸುವ ಬಗೆಗೂ ಬರಹ ಬರುವವರು ಆಲೋಚಿಸುವ ಬಗೆಗೂ ನಡುವೆ ಕೆಲವು ಮುಕ್ಯವಾದ ಬೇರ್ಮೆಗಳಿವೆ.

ಎತ್ತುಗೆಗೆ, ಬರಹಬಲ್ಲವರು ತಿಳಿವನ್ನು ಒಂದು ವಸ್ತುವಿನಂತೆ ಬೇರ್ಪಡಿಸಿ ಪರಿಶೀಲಿಸಬಲ್ಲರು; ಆದರೆ, ಬರಹಬಾರದವರು ಅದನ್ನು ತಿಳಿಸುವ ಮಾತಿನಿಂದ ಮತ್ತು ಮಾತನ್ನು ಬಳಸುವ ಸನ್ನಿವೇಶದಿಂದ ಬೇರ್ಪಡಿಸಲಾರರು. ಈ ಎರಡು ಬಗೆಯ ಜನರೊಳಗೆ ಹೊಂದಾಣಿಕೆಯಾಗಬೇಕಿದ್ದಲ್ಲಿ ಬರಹಬಾರದವರೆಲ್ಲ ಬರಹ ಬಳಸುವಂತಾಗಬೇಕು.

ಇದಲ್ಲದೆ, ಇವತ್ತು ಜನರಿಗೆ ಸಮಾಜದಲ್ಲಿ ಮುಂದೆ ಬರಲು ಬೇಕಾಗುವ ಎಲ್ಲಾ ಬಗೆಯ ತಿಳಿವುಗಳೂ ಬರಹಗಳಲ್ಲಿ, ಅದರಲ್ಲೂ ಕೂಡುಬಲೆಯಲ್ಲಿ ದೊರಕುತ್ತವೆ. ಸದ್ಯಕ್ಕೆ ಈ ತಿಳಿವು ಮುಕ್ಯವಾಗಿ ಇಂಗ್ಲಿಶ್‌ನಲ್ಲಿದೆ; ಆದರೆ, ಕನ್ನಡದಲ್ಲೂ ಸಾಕಶ್ಟು ತಿಳಿವು ದೊರಕುವ ಹಾಗೆ ಮಾಡಬಲ್ಲೆವು.

ಆದರೆ ಆ ಕೆಲಸವನ್ನು ನಡೆಸುವುದು, ಮತ್ತು ಕನ್ನಡ ಬರಹವನ್ನು ಎಲ್ಲರೂ ಬಳಸುವ ಹಾಗೆ ಮಾಡುವುದು ಎಂಬಿವೆರಡೂ ಒಟ್ಟೊಟ್ಟಿಗೆ ಮುಂದೆ ಸಾಗಬೇಕಾಗಿದೆ. ಯಾಕೆಂದರೆ, ಅವು ಒಂದಕ್ಕೊಂದು ಸಂಬಂದಿಸಿವೆ. ಕೂಡುಬಲೆಯಲ್ಲಿ ಹೆಚ್ಚು ಹೆಚ್ಚು ತಿಳಿವುಗಳು ಕನ್ನಡದಲ್ಲಿ ದೊರಕುವ ಹಾಗಾದರೆ, ಅದನ್ನು ಪಡೆಯಲು ಹೋಗುವವರ ಎಣಿಕೆ ಹೆಚ್ಚಾಗುತ್ತದೆ, ಮತ್ತು ಇದು ಹೆಚ್ಚಾದ ಹಾಗೆ ಅದರಲ್ಲಿ ತುಂಬಿಕೊಳ್ಳುವ ತಿಳಿವುಗಳೂ ಹೆಚ್ಚಾಗುತ್ತ ಹೋಗುತ್ತವೆ.

ಇದಲ್ಲದೆ, ಇವತ್ತು ಹಣದ ವಹಿವಾಟನ್ನು ಮತ್ತು ಬೇರೆ ಹಲವಾರು ಬಗೆಯ ಕೆಲಸಗಳನ್ನು ಕೂಡುಬಲೆಯ ಮೂಲಕ ನಡೆಸುವ ಅವಶ್ಯಕತೆ ಮೂಡಿಬಂದಿದೆ. ಬರಹಬಾರದವರು ಇದಕ್ಕಾಗಿ ಬೇರೆಯವರ ಹಂಗಿಗೆ ಬೀಳಬೇಕಾಗುತ್ತದೆ. ಇದನ್ನು ತಪ್ಪಿಸುವುದಕ್ಕಾಗಿಯೂ ಇವತ್ತು ಎಲ್ಲರೂ ಬರಹಬಲ್ಲವರಾಗಬೇಕಾಗಿದೆ.

ನಮ್ಮ ನಾಡಿನಲ್ಲಿ ಬರಹವನ್ನು ಬಳಸುವವರ ಎಣಿಕೆ ಇವತ್ತಿನ ವೇಗದಲ್ಲಿ ಹೆಚ್ಚಾಗುತ್ತಿದ್ದರೆ, ಎಲ್ಲರೂ ಬರಹಬಲ್ಲವರಾಗಬೇಕಿದ್ದಲ್ಲಿ ನಾವು ಅದಕ್ಕಾಗಿ ೨೦೬೦ರ ವರೆಗೆ ಕಾಯಬೇಕಾದೀತು ಎಂದು ಲೆಕ್ಕಹಾಕಲಾಗಿದೆ. ಅದಕ್ಕಿಂತಲೂ ಮೊದಲೇ ಬರಹ ಎಲ್ಲರನ್ನೂ ತಲಪುವಂತಾಗಬೇಕಿದ್ದಲ್ಲಿ ಅದಕ್ಕಾಗಿ ನಾವು ಎಲ್ಲವೂ ಈಗಿರುವಂತೆಯೇ ಇರಲಿ ಎಂದು ಸುಮ್ಮನೆ ಕುಳಿತಿರುವ ಬದಲು ಏನಾದರೂ ಮಾಡಲು ಹೊರಡಬೇಕು.

## ೧.೩ ಬರಹವನ್ನು ಕಲಿಯದಿರಲು ಕಾರಣಗಳು

ಜನರು ಬರಹವನ್ನು ಕಲಿಯದಿರಲು ಹಲವು ಕಾರಣಗಳಿವೆ: ಅದರ ನೆರವಿನಿಂದ ತಾವು ಪಡೆಯಬಲ್ಲ ಪ್ರಯೋಜನಗಳು ಎಂತಹವು ಎಂಬುದನ್ನು ತಿಳಿಯದಿರುವುದು ಒಂದು ಮುಖ್ಯ ಕಾರಣ.

ಬರಹವನ್ನು ಕಲಿತಿರುವ ಮತ್ತು ಅದನ್ನು ತಮ್ಮ ದಿನನಿತ್ಯದ ಜೀವನದಲ್ಲಿ ಬಳಸುವ ತಂದೆತಾಯಿಯರು (ಅದರಲ್ಲೂ ಮುಖ್ಯವಾಗಿ ತಾಯಂದಿರು) ಮನೆಯಲ್ಲಿ ಇರುವರಾದರೆ, ಅವರ ಮಕ್ಕಳು ಬರಹವನ್ನು ಕಲಿಯದೆ ಇರುವುದೇ ಇಲ್ಲ.

ಹಾಗಾಗಿ, ದೊಡ್ಡವರಿಗೆ ಬರಹ ಕಲಿಸುವುದರಿಂದ, ಮತ್ತು ಇದು ಸಾದ್ಯವಾಗದಿದ್ದರೂ, ಅವರಿಗೆ ಬರಹದ ಕಲಿಕೆ ಯಾಕೆ ಮುಕ್ಯ ಎಂಬುದನ್ನು ತಿಳಿಸಿಕೊಡುವುದರಿಂದ, ಅವರು ತಮ್ಮ ಮಕ್ಕಳ ಕಲಿಕೆಗೆ ಅಡ್ಡಿಪಡಿಸದಂತೆ ಮಾಡಲು ಬರುತ್ತದೆ.

ಬಡತನ, ಹತ್ತಿರ ಶಾಲೆಗಳಿಲ್ಲದಿರುವುದು, ಜಾತಿಯ ಸಮಸ್ಯೆಗಳು ಮೊದಲಾದ ಬೇರೆಯೂ ಹಲವು ಕಾರಣಗಳಿಂದಾಗಿಯೂ ಮಕ್ಕಳು ಶಾಲೆಗೆ ಹೋಗದಿರುತ್ತಾರೆ, ಮತ್ತು ಹೋಗತೊಡಗಿದರೂ ನಡುವೆಯೇ ನಿಲ್ಲಿಸಿಬಿಡುತ್ತಾರೆ.

ಇದಲ್ಲದೆ, ಬರಹಕ್ಕೆ ಸಂಬಂದಿಸಿದಂತಹ ಎರಡು ಮುಕ್ಯವಾದ ತೊಡಕುಗಳಿಂದಾಗಿಯೂ ಮಕ್ಕಳು ಮತ್ತು ದೊಡ್ಡವರು ಬರಹದಿಂದ ದೂರ ಉಳಿಯುವ ಹಾಗೆ ಆಗುತ್ತದೆ:

(೧) ಬರಹಕ್ಕೆ ಬಳಸುವ ಬರವಣಿಗೆ ತುಂಬಾ ತೊಡಕಿನದಾಗಿರುವುದು, ಇಲ್ಲವೇ ಬರವಣಿಗೆ ಸುಲಬವಾಗಿದ್ದರೂ ಅದನ್ನು ಬರಹಕ್ಕೆ ಅಳವಡಿಸಿರುವ ಬಗೆಯಲ್ಲಿ ತುಂಬಾ ತಪ್ಪುಗಳಾಗಿರುವುದು ಒಂದು ಕಾರಣ; ಮತ್ತು

(೨) ಬರಹಗಳಲ್ಲಿ ತುಂಬಾ ಎರವಲು ಪದಗಳನ್ನು ಬಳಸುವುದರಿಂದಾಗಿ, ಇಲ್ಲವೇ ಮಾತು ಬದಲಾದಾಗಲೂ ಬರಹ ಬದಲಾಗದೆ ಉಳಿಯುವುದರಿಂದಾಗಿ, ಅದು ಆಡುನುಡಿಯಿಂದ ತೀರ ಬೇರಾಗಿರುವುದು ಇನ್ನೊಂದು ಕಾರಣ.

## ೧.೪ ಬರವಣಿಗೆಯ ತೊಡಕು

ಬರಹದಲ್ಲಿ ಬಳಕೆಯಾಗುವ ಬರವಣಿಗೆ ಎರಡು ಬಗೆಗಳಲ್ಲಿ ಕಲಿಯಲು ಮತ್ತು ಬಳಸಲು ತೊಡಕಿನದಾಗಿರಬಲ್ಲುದು: ಆ ಬರವಣಿಗೆಯೇ ತುಂಬಾ ತೊಡಕಿನದಾಗಿರಬಹುದು, ಇಲ್ಲವೇ

ಅದನ್ನು ಒಂದು ನುಡಿಯ ಬರಹಕ್ಕೆ ಅಳವಡಿಸಿರುವ ಬಗೆ ತೊಡಕಿನದಾಗಿರಬಹುದು.

ಎತ್ತುಗೆಗೆ, ಚಯ್ನೀಸ್ ಬರಹಗಳಲ್ಲಿ ಬಳಕೆಯಾಗುವ ಬರವಣಿಗೆಯೇ ತುಂಬಾ ತೊಡಕಿನದು; ಅದರಲ್ಲಿ ಬರುವ ಬರಿಗೆಗಳು ನೇರವಾಗಿ ಉಲಿಗಳನ್ನು ಸೂಚಿಸುವುದಿಲ್ಲ; ಕೆಲವು ಬರಿಗೆಗಳು ಹುರುಳು(ಅರ್ತ)ಗಳನ್ನು ತಿಳಿಸುವುದಕ್ಕಾಗಿ ಬಳಕೆಯಾಗುತ್ತವೆ, ಮತ್ತು ಇನ್ನು ಕೆಲವು ಬರಿಗೆಗಳು ಹುರುಳಿನೊಂದಿಗೆ ಪದಗಳ ಉಲಿಪ(ಉಚ್ಚಾರಣೆಯು)ನ್ನೂ ತಿಳಿಸುವಲ್ಲಿ ಬಳಕೆಯಾಗುತ್ತವೆ. ಹಾಗಾಗಿ, ಚಯ್ನೀಸ್ ಬರಹವನ್ನು ಕಲಿಯುವವರು ಬರಿಯ ಒಂದು ದಿನಪತ್ರಿಕೆಯನ್ನು ಓದ ಬೇಕಿದ್ದರೂ ಸಾವಿರಗಟ್ಟಲೆ ಬರಿಗೆಗಳನ್ನು ಕಲಿತು ನೆನಪಿನಲ್ಲಿರಿಸಿಕೊಳ್ಳಬೇಕಾಗುತ್ತದೆ.

ಇದಕ್ಕೆ ಬದಲು, ಇಂಗ್ಲಿಶ್‌ನಲ್ಲಿ ಬಳಕೆಯಾಗುವ ರೋಮನ್ ಬರವಣಿಗೆಯಲ್ಲಿ ಬರಿಗೆಗಳು ನೇರವಾಗಿ ಉಲಿಗಳನ್ನು ತಿಳಿಸ ಬಲ್ಲುವು; ಹಾಗಾಗಿ, ಕಲಿಯಲು ಮತ್ತು ಬಳಸಲು ಅದು ತುಂಬಾ ಸುಲಬವಾದ ಬರವಣಿಗೆ. ಆದರೆ, ಇಂಗ್ಲಿಶ್‌ನಲ್ಲಿ ಆ ಬರವಣಿಗೆ ಯನ್ನು ಅಳವಡಿಸಿಕೊಂಡಿರುವ ಬಗೆಯಲ್ಲಿ ಹಲವು ತಪ್ಪುಗ ಳಾಗಿವೆ.

ಇದಲ್ಲದೆ, ಇಂಗ್ಲಿಶ್ ನುಡಿ ಬದಲಾಗುತ್ತಾ ಬಂದರೂ ಅದಕ್ಕನುಸಾರವಾಗಿ ಇಂಗ್ಲಿಶ್ ಬರವಣಿಗೆಯಲ್ಲಿ ಯಾವ ಬದಲಾವಣೆಯನ್ನೂ ಮಾಡಿಲ್ಲ. ಎತ್ತುಗೆಗೆ, ಇಂಗ್ಲಿಶ್ ನುಡಿಯ ತೆರೆಯುಲಿ(ಸ್ವರ)ಗಳು ಹಲವು ಬಗೆಯ ಮಾರ್ಪಾಡುಗಳಿ ಗೊಳಗಾಗಿವೆ; ಆದರೆ, ಅದಕ್ಕನುಸಾರವಾಗಿ ಇಂಗ್ಲಿಶ್ ಬರಹದಲ್ಲಿ ಮಾರ್ಪಾಡುಗಳನ್ನು ನಡೆಸಿಲ್ಲ. ಇಂತಹ ಹಲವು ಕಾರಣಗಳಿಂದಾಗಿ,

ಇವತ್ತು ಇಂಗ್ಲಿಶ್ ಬರಹವನ್ನು ಕಲಿಯುವ ಮತ್ತು ಬಳಸುವ ಕೆಲಸ ತುಂಬಾ ತೊಡಕಿನದಾಗಿದೆ.

ಬರಹ ಈ ರೀತಿ ತೊಡಕಿನದಾಗಿದೆಯಾದಲ್ಲಿ, ಅದನ್ನು ದೊಡ್ಡವರಿಗೆ ಕಲಿಸುವುದು ತುಂಬಾ ಕಶ್ಟ; ಯಾಕೆಂದರೆ, ಅವರಿಗೆ ಆ ಕಲಿಕೆಯ ಮೇಲಿರುವ ಆಸಕ್ತಿ ಬಹಳ ಬೇಗನೆ ಹೊರಟು ಹೋಗುತ್ತದೆ; ಬರವಣಿಗೆ ಸುಲಬವಾಗಿದೆಯಾದರೆ, ಕೆಲವೇ ಕೆಲವು ದಿನಗಳಲ್ಲಿ ಅವರು ಕತೆ-ಕಾದಂಬರಿಗಳನ್ನು ಮತ್ತು ದಿನಪತ್ರಿಕೆಗಳನ್ನು ಓದಲು ತೊಡಗಬಲ್ಲರು; ಹಾಗಾಗಿ, ಅಂತಹ ಬರಹಗಳ ಕಲಿಕೆಯಲ್ಲಿಅವರ ಆಸಕ್ತಿ ಅಳಿಯದೆ ಉಳಿದು ಕೊಳ್ಳುತ್ತದೆ.

ಚಿಕ್ಕ ಮಕ್ಕಳ ಕಲಿಕೆಯೂ ಬರಹದ ತೊಡಕನ್ನು ಅವಲಂಬಿಸಿರಬಲ್ಲುದು. ಬರವಣಿಗೆ ತುಂಬಾ ಸುಲಬವಾಗಿದೆ ಯಾದಲ್ಲಿ, ಎರಡು ಮೂರು ವರ್ಶ ಕಲಿತ ಮೇಲೆ ಶಾಲೆಯನ್ನು ಬಿಟ್ಟು ಹೋಗುವವರೂ ಅದರ ಬಳಕೆಯನ್ನು ಮುಂದುವರಿಸ ಬಲ್ಲರು; ಅದು ತೊಡಕಿನದಾಗಿದೆಯಾದಲ್ಲಿ, ಅವರಿಗೆ ಅದರ ಸ್ವಲ್ಪ ಸಮಯದ ಕಲಿಕೆಯಿಂದ ಯಾವ ಪ್ರಯೋಜನವನ್ನೂ ಪಡೆಯಲು ಬರುವುದಿಲ್ಲ; ಯಾಕೆಂದರೆ, ದಿನಪತ್ರಿಕೆ, ವಾರಪತ್ರಿಕೆ ಗಳಂತಹವನ್ನು ಓದಲು ಬರಬೇಕಿದ್ದರೂ ಅವರು ಅಂತಹ ಬರವಣಿಗೆಯನ್ನು ಬಿಡದೆ ಹಲವು ವರ್ಶಗಳ ವರೆಗೆ ಕಲಿತಿರ ಬೇಕಾಗುತ್ತದೆ.

ಹಾಗಾಗಿ, ಬೇರೆ ತೊಡುಕುಗಳ ಹಾಗೆ, ಇಂತಹ ಬರವಣಿಗೆಯ ತೊಡಕುಗಳನ್ನು ನೀಗುವ ಮೂಲಕವೂ ಒಂದು ಸಮಾಜದಲ್ಲಿ ಇಲ್ಲವೇ ನಾಡಿನಲ್ಲಿ ಬರಹವನ್ನು ಕಲಿಯುವ ಮತ್ತು ಬಳಸುವ ಜನರ ಎಣಿಕೆ ಹೆಚ್ಚಾಗುವಂತೆ ಮಾಡಬಲ್ಲೆವು.

## ೧ ಮುನ್ನೋಟ

ಬರವಣಿಗೆ ತುಂಬಾ ತೊಡಕಿನದಾಗಿರುವಲ್ಲೂ ಒಂದು ಸಮಾಜದ ಇಲ್ಲವೇ ನಾಡಿನ ಎಲ್ಲಾ ಜನರೂ ಬರಹಬಲ್ಲವರಾಗಿರಲು ಸಾದ್ಯವಿಲ್ಲವೆಂದೇನಿಲ್ಲ; ಎತ್ತುಗೆಗೆ, ಜಪಾನೀಸ್ ಬರವಣಿಗೆ ಒಂದು ತುಂಬಾ ತೊಡಕಿನ ಬರವಣಿಗೆ; ಅದರಲ್ಲಿ ಕಂಜಿ, ಕತಕನ, ಮತ್ತು ಹಿರಿಗನ ಎಂಬ ಮೂರು ಬಗೆಯ ಬರಿಗೆಗಳನ್ನು ಒಟ್ಟೊಟ್ಟಿಗೆ ಬಳಸಲಾಗುತ್ತದೆ. ಹಾಗಿದ್ದರೂ, ಆ ದೇಶದಲ್ಲಿ ಬರಹವನ್ನು ಬಳಸದಿರುವ ಜನರೇ ಇಲ್ಲ.

ಆದರೆ, ತುಂಬಾ ತೊಡಕಿನ ಬರವಣಿಗೆಯಿರುವ, ಮತ್ತು ಅದರಿಂದಾಗಿ, ಮೇಲ್ವರ್ಗದ ಜನರು ಮಾತ್ರ ಬರಹಬಲ್ಲವರಾಗಿರುವಂತಹ ಸಮಾಜಗಳೂ ಹಲವಿವೆ. ಎತ್ತುಗೆಗೆ, ತುಂಬಾ ತೊಡಕು ತೊಡಕಾದ ಅರೇಬಿಕ್ ಬರವಣಿಗೆಯನ್ನು ಬಳಸುವ ಹಲವು ನಾಡುಗಳಲ್ಲಿ ಇವತ್ತಿಗೂ ಮೇಲ್ವರ್ಗದವರ ಬಳಕೆಯಲ್ಲಿ ಮಾತ್ರ ಬರಹ ಉಳಿದುಕೊಂಡಿದೆ.

ಇದಲ್ಲದೆ, ಇಂತಹ ಬರವಣಿಗೆಯಿರುವ ಬೇರೆ ಕೆಲವು ನಾಡುಗಳು ತಮ್ಮ ತೊಡಕು ತೊಡಕಾದ ಬರವಣಿಗೆಯನ್ನು ಬಿಟ್ಟುಕೊಟ್ಟು, ಅದಕ್ಕೆ ಬದಲಾಗಿ ತುಂಬಾ ಸುಲಬವಾಗಿರುವ ಬೇರೊಂದು ಬರವಣಿಗೆಯನ್ನು ತಮ್ಮ ಬರಹಕ್ಕೆ ಒಳ್ಳೇ ರೀತಿಯಲ್ಲಿ ಅಳವಡಿಸಿಕೊಂಡಾಗ, ಆ ನಾಡುಗಳಲ್ಲಿ ಬಹಳ ಬೇಗನೆ ಬರಹಬಲ್ಲವರ ಎಣಿಕೆ ಹೆಚ್ಚಾಗಿರುವುದೂ ಇದೆ.

ಎತ್ತುಗೆಗೆ, ಟರ್ಕಿಯಲ್ಲಿ ತುಂಬಾ ತೊಡಕು ತೊಡಕಾದ ಅರೇಬಿಕ್ ಮೂಲದ ಬರವಣಿಗೆಯನ್ನು ಬಿಟ್ಟುಕೊಟ್ಟು, ಕಲಿಯಲು ಮತ್ತು ಬಳಸಲು ತುಂಬಾ ಸುಲಬವಾಗುವ ಹಾಗೆ ರೋಮನ್ ಬರವಣಿಗೆಯನ್ನು ಅಲ್ಲಿನ ಟರ್ಕಿಶ್ ನುಡಿಗೆ ಅಳವಡಿಸಿಕೊಳ್ಳಲಾಯಿತು; ಹಾಗೆ ಮಾಡಿದ ಮೇಲೆ, ಆ ದೇಶದಲ್ಲಿ ಬರಹಬಲ್ಲವರ ಎಣಿಕೆ ಬಹಳ ಬೇಗನೆ ಹೆಚ್ಚಾಗಿತ್ತು.

ಮಲಯೇಶಿಯಾ ಮತ್ತು ಇಂಡೋನೇಶಿಯಾಗಳಲ್ಲೂ ರೋಮನ್ ಬರವಣಿಗೆಯನ್ನು ಅಳವಡಿಸಿದುದರಿಂದಾಗಿ, ಆ ನಾಡುಗಳಲ್ಲೂ ಬರಹಬಲ್ಲವರ ಎಣಿಕೆ ತುಂಬಾ ಹೆಚ್ಚಾಗಿದೆ.

ಹಾಗಾಗಿ, ಕಲಿಯಲು ಕಶ್ಟವಾಗಿರುವ ಬರವಣಿಗೆಯನ್ನು ಬಿಟ್ಟುಕೊಟ್ಟು ಸುಲಬವಾದ ಬರವಣಿಗೆಯನ್ನು ಬಳಸುವ ಮೂಲಕ, ಇಲ್ಲವೇ ಬಳಕೆಯಲ್ಲಿರುವ ಬರವಣಿಗೆಯನ್ನು ಸುಲಬವಾಗುವಂತೆ ಮಾರ್ಪಡಿಸುವ ಮೂಲಕ, ಬರಹವನ್ನು ಕಲಿಯುವ ಮತ್ತು ಬಳಸುವ ಕೆಲಸ ಹೆಚ್ಚು ಸುಲಬವಾಗುವ ಹಾಗೆ ಮಾಡಲು ಬರುತ್ತದೆ, ಮತ್ತು ಹಾಗೆ ಮಾಡುವುದರಿಂದ ಬರಹವನ್ನು ಎಲ್ಲರೂ ಕಲಿಯುವ ಹಾಗೆ ಮಾಡುವ ಕೆಲಸವೂ ಹೆಚ್ಚು ಸುಲಬವಾಗುತ್ತದೆ.

ಕನ್ನಡಕ್ಕೆ ಅವಶ್ಯವಿರುವ ೩೧ ಬರಿಗೆಗಳನ್ನು ಮಾತ್ರ ಬರಹದಲ್ಲಿ ಉಳಿಸಿಕೊಳ್ಳುವುದು, ಮತ್ತು ಸಂಸ್ಕ್ರುತ ಎರವಲುಗಳನ್ನೆಲ್ಲ ಹೇಗೆ ಓದುತ್ತೇವೆಯೋ ಹಾಗೆಯೇ ಬರೆಯುವುದು ಎನ್ನುವ ಎರಡು ಮಾರ್ಪಾಡುಗಳ ಮೂಲಕ ಕನ್ನಡ ಬರಹದ ಕಲಿಕೆ ಮತ್ತು ಬಳಕೆ ತುಂಬಾ ಸುಲಬವಾಗುವ ಹಾಗೆ ಮಾಡಬಲ್ಲೆವು, ಮತ್ತು ಹೀಗೆ ಮಾಡುವ ಮೂಲಕ ಕನ್ನಡ ಬರಹವನ್ನು ಎಲ್ಲರಿಗೂ ತಲಪಿಸುವಲ್ಲಿ ಒಂದು ದೊಡ್ಡ ಹೆಜ್ಜೆ ಮುಂದಿರಿಸಬಲ್ಲೆವು.

ಇದನ್ನು ನಡೆಸುವುದು ಹೇಗೆ ಎಂಬುದನ್ನು ಮುಂದಿನ ಪಸುಗೆ(ಅದ್ಯಾಯ)ಗಳಲ್ಲಿ ತಿಳಿಸಲಾಗಿದೆ.

# ೨. ಓದುವ ಹಾಗೆ ಬರೆಯುವುದು

## ೨.೧ ಬರವಣಿಗೆಯ ಆಳ

ಒಂದು ನುಡಿಯ ಬರಹಗಳನ್ನು ಓದುವ ಹಾಗೆ ಬರೆಯುವುದಿದ್ದರೆ ಮತ್ತು ಬರೆಯುವ ಹಾಗೆ ಓದುವುದಿದ್ದರೆ ಅವನ್ನು ಕಲಿಯುವ ಮತ್ತು ಬಳಸುವ ಕೆಲಸ ತುಂಬಾ ಸುಲಬವಾಗುತ್ತದೆ. ಬರೆಯುವುದಕ್ಕೂ ಓದುವುದಕ್ಕೂ ನಡುವಿರುವ ವ್ಯತ್ಯಾಸ ಹೆಚ್ಚಿದಂತೆಲ್ಲ ಓದು-ಬರಹಗಳನ್ನು ಕಲಿಯುವ ಮತ್ತು ಬಳಸುವ ಕೆಲಸ ಕಶ್ಟವಾಗುತ್ತಾ ಹೋಗುತ್ತದೆ.

ಬರೆಯುವುದಕ್ಕೂ ಓದುವುದಕ್ಕೂ ನಡುವೆ ಯಾವ ವ್ಯತ್ಯಾಸವೂ ಇಲ್ಲದ ಕೊರಿಯನ್, ಸ್ಪೀಡಿಶ್‌ನಂತಹ ಬರವಣಿಗೆಗಳನ್ನು ಎರಡು-ಮೂರು ತಿಂಗಳುಗಳಲ್ಲೇ ಸಲೀಸಾಗಿ ಓದಲು ಕಲಿಯಬಹುದು; ಆದರೆ, ಬರೆಯುವುದಕ್ಕೂ ಓದುವುದಕ್ಕೂ ನಡುವೆ ತುಂಬಾ ವ್ಯತ್ಯಾಸಗಳಿರುವ ಇಂಗ್ಲಿಶ್, ಅರೇಬಿಕ್‌ನಂತಹ ಬರವಣಿಗೆಗಳನ್ನು ಓದಲು ಕಲಿಯಬೇಕಿದ್ದಲ್ಲಿ ಅದಕ್ಕೆ ಮೂರು-ನಾಲ್ಕು ವರ‍್ಶಗಳೇ ಬೇಕಾಗುತ್ತವೆ.

ಒಂದು ಬರವಣಿಗೆಯಲ್ಲಿ ಬರೆಯುವುದಕ್ಕೂ ಓದುವುದಕ್ಕೂ ನಡುವಿರುವ ವ್ಯತ್ಯಾಸವನ್ನು ಬರವಣಿಗೆಯ ಆಳ ಎಂಬುದಾಗಿ ಕರೆಯಲಾಗುತ್ತದೆ. ಆಳ ಕಡಿಮೆಯಿರುವ ಬರವಣಿಗೆಯನ್ನು

ಓದಲು ಕಲಿಯುವಾಗ, ಅದರಲ್ಲಿ ಬರಿಗೆ(ಅಕ್ಶರ)ಗಳಿಗೂ ಉಲಿಗಳಿಗೂ ನಡುವಿರುವ ಸಂಬಂದವನ್ನು ಮಕ್ಕಳು ತುಂಬಾ ಬೇಗನೆ ಕಂಡುಕೊಳ್ಳುತ್ತಾರೆ, ಮತ್ತು ಇದರಿಂದಾಗಿ, ಹೊಸ ಹೊಸ ಪದಗಳು ಕಣ್ಣಿಗೆ ಬಿದ್ದಾಗ ಅವನ್ನು ಮಕ್ಕಳು ತಾವೇ ಸುಲಬವಾಗಿ ಓದಿಕೊಂಡು ಮುಂದೆ ಹೋಗುತ್ತಾರೆ.

ಇದಕ್ಕೆ ಬದಲು, ಹೆಚ್ಚು ಆಳವಿರುವ ಬರವಣಿಗೆಯನ್ನು ಓದಲು ಕಲಿಯುವಾಗ, ಅದರಲ್ಲಿ ಬರಿಗೆಗಳಿಗೂ ಉಲಿಗಳಿಗೂ ನಡುವೆ ಯಾವ ರೀತಿಯ ಸಂಬಂದ ಇದೆ ಎಂಬುದು ಮಕ್ಕಳಿಗೆ ಗೊತ್ತಾಗುವುದೇ ಇಲ್ಲ. ಈ ಸಂಬಂದ ತುಂಬಾ ಸಿಕ್ಕಲು ಸಿಕ್ಕಲಾಗಿ ಇರುವುದೇ ಇದಕ್ಕೆ ಕಾರಣ. ಹಾಗಾಗಿ, ಅಂತಹ ಬರವಣಿಗೆಯಲ್ಲಿ ಬರುವ ಒಂದೊಂದು ಪದಕ್ಕೂ ಅದರ ಓದಿಗೂ ನಡುವಿರುವ ಸಂಬಂದವನ್ನು ತಿಳಿದುಕೊಂಡು ಅವರು ಅದನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ, ಮತ್ತು ಓದುವಾಗ ಅದನ್ನು ನೆನಪಿಗೆ ತಂದುಕೊಂಡು ಓದಬೇಕಾಗುತ್ತದೆ.

ಹಾಗಾಗಿ, ಒಂದೊಂದು ಹೊಸ ಪದ ಎದುರಾದಾಗಲೂ ಅದನ್ನು ಓದುವುದು ಹೇಗೆ ಎಂಬುದನ್ನು ಅವರು ಹೊಸದಾಗಿ ತಿಳಿದುಕೊಳ್ಳಬೇಕಾಗುತ್ತದೆ, ಮತ್ತು ಅದನ್ನು ತಮ್ಮ ನೆನಪಿಗೆ ಸೇರಿಸಿಕೊಳ್ಳ ಬೇಕಾಗುತ್ತದೆ. ಆಮೇಲೆ ಓದುವಾಗಲೆಲ್ಲ ಅದನ್ನು ತಿರುತಿರುಗಿ ನೆನಪಿಗೆ ತಂದುಕೊಂಡು ಓದಬೇಕಾಗುತ್ತದೆ.

ಬರವಣಿಗೆಯ ಆಳ ಹೆಚ್ಚಿರುವ ನುಡಿಗಳಲ್ಲಿ ಎರಡು ಬಗೆಗಳಿರುತ್ತವೆ: ಬರಿಗೆಗಳಿಗೂ ಅವುಗಳ ಓದಿಗೂ ನಡುವಿರುವ ವ್ಯತ್ಯಾಸಗಳನ್ನು ಕೆಲವೇ ಕೆಲವು ಕಟ್ಟಲೆಗಳ ಮೂಲಕ ವಿವರಿಸಲು ಬರುವಂತಹವುಗಳದು ಒಂದು ಬಗೆ, ಮತ್ತು ಹಾಗೆ ವಿವರಿಸಲು ಬಾರದಿರುವಂತವುಗಳದು ಇನ್ನೊಂದು ಬಗೆ. ಇವುಗಳಲ್ಲಿ ಮೊದಲನೇ ಬಗೆಯ ಬರವಣಿಗೆಯನ್ನು ಕಲಿಯುವಾಗ ಇಲ್ಲವೇ

ಕಲಿಸುವಾಗ ಕಟ್ಟಲೆಗಳ ನೆರವನ್ನು ಪಡೆಯಲು ಬರುತ್ತದೆ; ಆದರೆ, ಎರಡನೇ ಬಗೆಯ ಬರವಣಿಗೆಯನ್ನು ಕಲಿಯುವಲ್ಲಿ ಅಂತಹ ಯಾವ ನೆರವೂ ದೊರಕುವುದಿಲ್ಲ.

ಒಂದು ಬರವಣಿಗೆಯನ್ನು ಕಲಿಯಲು ಕಶ್ಟವಾಗುವುದಕ್ಕೆ ಬೇರೆಯೂ ಕೆಲವು ಕಾರಣಗಳಿವೆ. ಎತ್ತುಗೆಗೆ, ಅದರಲ್ಲಿ ಬಳಕೆಯಾಗುವ ಬರಿಗೆಗಳು ಎಶ್ಟರ ಮಟ್ಟಿಗೆ ಒಂದರಿಂದೊಂದು ಬೇರಾಗಿವೆ, ಅದರಲ್ಲಿ ಒತ್ತುಬರಿಗೆಗಳನ್ನು ಹೇಗೆ ಬರೆಯಲಾಗುತ್ತದೆ ಎಂಬಂತಹ ಬರಿಗೆಗಳ ರಚನೆಯ ಕುರಿತಾಗಿರುವ ಸಂಗತಿಗಳ ಮೇಲೂ ಅದರ ಕಲಿಕೆ ಕಶ್ಟವಾಗಿ ಇಲ್ಲವೇ ಸುಲಬವಾಗಿ ತೋರಬಲ್ಲುದು.

## ೨.೨ ಕನ್ನಡ ಬರವಣಿಗೆಯ ಆಳ

ಕನ್ನಡದ ಬರವಣಿಗೆಯಲ್ಲಿ ಕನ್ನಡದವೇ ಆದ ಪದಗಳ ಮಟ್ಟಿಗೆ ಬರವಣಿಗೆಯ ಆಳ ತುಂಬಾ ಕಡಿಮೆ ಇದೆ. ಹಾಗಾಗಿ, ಈ ಪದಗಳನ್ನು ಓದಲು ಮತ್ತು ಬರೆಯಲು ಕಲಿಯುವ ಕೆಲಸ ತುಂಬಾ ಸುಲಬವಾದುದು. ಮಕ್ಕಳು ಈ ಪದಗಳಲ್ಲಿ ಬರುವ ಬರಿಗೆಗಳಿಗೂ ಅವುಗಳ ಓದಿಗೂ ನಡುವಿರುವ ಸಂಬಂದವನ್ನು ತುಂಬಾ ಬೇಗನೆ ಕಂಡುಕೊಳ್ಳಬಲ್ಲರು, ಮತ್ತು ಇದನ್ನೊಮ್ಮೆ ಕಂಡುಕೊಂಡ ಮೇಲೆ, ಹೊಸ ಹೊಸ ಪದಗಳು ಎದುರಾದಾಗಲೆಲ್ಲ ಅವನ್ನು ತಾವಾಗಿಯೇ ಸುಲಬವಾಗಿ ಓದಿಕೊಂಡು ಮುಂದೆ ಹೋಗಬಲ್ಲರು.

ಆದರೆ, ಕನ್ನಡ ಬರಹಗಳಲ್ಲಿ ಬಳಕೆಯಾಗುವ ಸಂಸ್ಕ್ರುತದ ಎರವಲು ಪದಗಳ ಮಟ್ಟಿಗೆ ಇದು ನಿಜವಲ್ಲ. ಅವುಗಳಲ್ಲಿ ಬಳಕೆಯಾಗುವ ಕ-ಖ, ತ-ಥ, ದ-ಧ, ಶ-ಷ ಮೊದಲಾದ ಪಳೆಂಟು ಬರಿಗೆಜೋಡಿಗಳ ನಡುವಿರುವ ವ್ಯತ್ಯಾಸ ಅವನ್ನು

ಕಲಿಸುವವರ ಮತ್ತು ಕಲಿಯುವವರ ಓದಿನಲ್ಲಿ ಕಾಣಿಸಿಕೊಳ್ಳುವುದಿಲ್ಲ. ಈ ಎರಡು ಬಗೆಯ ಬರಿಗೆಗಳನ್ನೂ ಅವರು ಒಂದೇ ಬಗೆಯಲ್ಲಿ ಓದುತ್ತಾರೆ. ಹಾಗಾಗಿ, ಅಂತಹ ಬರಿಗೆಗಳಿರುವ ಪದಗಳನ್ನು ಓದಲು ಮತ್ತು ಬರಹಗಳಲ್ಲಿ ಬಳಸಲು ಅವು ಬರುವ ಪದಗಳನ್ನು ಒಂದೊಂದಾಗಿ ನೆನಪಿನಲ್ಲಿರಿಸಿಕೊಳ್ಳುವುದೊಂದೇ ದಾರಿ.

ಇದಲ್ಲದೆ, ಈ ವ್ಯತ್ಯಾಸದ ಹಿಂದೆ ಯಾವ ಬಗೆಯ ಕಟ್ಟಲೆಯನ್ನೂ ಕಾಣಲು ಬರುವುದಿಲ್ಲ. ಎತ್ತುಗೆಗೆ, ಯಾವ ಪದದ ಯಾವ ಜಾಗದಲ್ಲಿ ಧಕಾರವನ್ನು ಬಳಸಬೇಕು ಮತ್ತು ಯಾವುದರಲ್ಲಿ ದಕಾರವನ್ನು ಬಳಸಬೇಕು ಎಂಬುದನ್ನು ತಿಳಿಸಬಲ್ಲ ಯಾವ ಕಟ್ಟಲೆಯೂ ಇಲ್ಲ. ಹಾಗಾಗಿ, ಅಂತಹ ಪದಗಳು ಕನ್ನಡದ ಬರವಣಿಗೆಯನ್ನು ತುಂಬಾ ಸಿಕ್ಕಲು ಬರವಣಿಗೆಯನ್ನಾಗಿಸಿ, ಅದರ ಅಳವನ್ನು ಹೆಚ್ಚಿಸುತ್ತವೆ.

ಕನ್ನಡದವೇ ಆದ ಪದಗಳ ಓದನ್ನು ಮಕ್ಕಳು ತಮ್ಮದಾಗಿಸುತ್ತಿರುವ ಸಮಯದಲ್ಲೇನೇ ಇವತ್ತಿನ ಹಾಗೆ, ಇಂತಹ ಸಂಸ್ಕೃತದಿಂದ ಎರವಲು ಪಡೆದ ಪದಗಳ ಓದನ್ನೂ ಅವರಿಗೆ ಕಲಿಸಹೊರಟಲ್ಲಿ, ಕನ್ನಡದವೇ ಆದ ಪದಗಳ ಓದಿನಲ್ಲೂ ಅವರು ಹಿಂದೆ ಬೀಳುತ್ತಾರೆ. ಯಾಕೆಂದರೆ, ಕನ್ನಡದವೇ ಆದ ಪದಗಳ ಓದಿನಲ್ಲಿ ಬರಿಗೆಗಳಿಗೂ ಅವುಗಳ ಓದಿಗೂ ನೇರವಾದ ಸಂಬಂದವಿದೆ ಎಂಬುದನ್ನು ಕಂಡುಕೊಳ್ಳಲು ಈ ಸಿಕ್ಕಲು ಓದಿನ ಪದಗಳು ಅಡ್ಡಿಯಾಗುತ್ತವೆ.

## ೨.೩ ಕನ್ನಡ ಬರಹದಲ್ಲಿ ಸಂಸ್ಕೃತ ಪದಗಳು

ಸಂಸ್ಕೃತ ಪದಗಳನ್ನು ಕನ್ನಡ ಬರಹಗಳಲ್ಲಿ ಬಳಸುವಾಗಲೆಲ್ಲ ಅವನ್ನು ಸಂಸ್ಕೃತದಲ್ಲಿರುವ ಹಾಗೆಯೇ ಬರೆಯಬೇಕು

ಎಂಬುದಾಗಿ ಕನ್ನಡದ ಮಟ್ಟಿಗೆ ತೀರಾ ಅನವಶ್ಯಕವಾದ ಒಂದು ಕಟ್ಟಲೆಯನ್ನು ಕನ್ನಡದ ಬರಹಗಾರರು ಮಾಡಿಕೊಂಡಿದ್ದಾರೆ. ಈ ಬರಹಗಾರರಲ್ಲಿ ಹೆಚ್ಚಿನವರೂ ಬರಹವನ್ನು ಕಲಿಯುವ ಸಮಯದಲ್ಲಿ ಸಂಸ್ಕ್ರುತದ ಪದಸ್ವರೂಪವನ್ನು ತಮ್ಮದಾಗಿಸಿಕೊಂಡಿದ್ದಾರೆ. ಹಾಗಾಗಿ, ಅವರಿಗೆ ಹೀಗೆ ಮಾಡುವುದು ಹೆಚ್ಚು ಕಶ್ಟವೆಂದೆನಿಸುವುದಿಲ್ಲ.

ಆದರೆ, ಕನ್ನಡ ಬರಹಗಳನ್ನು ಬಳಸಬೇಕಾಗಿರುವ ಜನಸಾಮಾನ್ಯರ ಮಟ್ಟಿಗೆ, ಮತ್ತು ಕಲಿಯಬೇಕಾಗಿರುವ ಮಕ್ಕಳ ಮಟ್ಟಿಗೆ, ಇದು ಒಂದು ತುಂಬಾ ತೊಡಕಿನ ಕೆಲಸವಾಗಿದೆ. ಯಾಕೆಂದರೆ, ಎರವಲಾಗಿ ಪಡೆದಿರುವ ಈ ಸಂಸ್ಕ್ರುತ ಪದಗಳನ್ನು ಉಲಿಯುವಾಗ ಯಾರೂ (ಮೇಲ್ವರ‍್ಗದ ಬರಹಗಾರರೂ) ಇಂತಹ ಕಟ್ಟಲೆಯನ್ನು ಪಾಲಿಸುವುದಿಲ್ಲ. ಅವುಗಳಲ್ಲಿ ಕಾಣಿಸುವ ಹಲವು ಬಗೆಯ ವ್ಯತ್ಯಾಸಗಳನ್ನು ಹೆಚ್ಚಿನ ಕನ್ನಡಿಗರೂ ತಮ್ಮ ಓದಿನಲ್ಲಿ ಇಲ್ಲವೇ ಮಾತಿನಲ್ಲಿ ಕಾಣಿಸುವುದಿಲ್ಲ.

ಹಾಗಾಗಿ, ಹೆಚ್ಚಿನ ಕನ್ನಡಿಗರಿಗೂ ಸಂಸ್ಕ್ರುತ ಪದಸ್ವರೂಪ ಪರಿಚಿತವಾದುದಲ್ಲ. ಕನ್ನಡ ಬರಹಗಳನ್ನು ಓದಲು ಕಲಿಯುವುದಕ್ಕಾಗಿ ಮತ್ತು ಕನ್ನಡದಲ್ಲಿ ಬರೆಯುವುದಕ್ಕಾಗಿ ಮಾತ್ರ ಅವರು ಈ ಸಂಸ್ಕ್ರುತದ ಪದಸ್ವರೂಪವನ್ನು ತಮ್ಮದಾಗಿಸಿಕೊಳ್ಳಬೇಕಾಗುತ್ತದೆ.

ಎತ್ತುಗೆಗೆ, ಸಂಸ್ಕ್ರುತ ಪದಗಳಲ್ಲಿ ಬರುವ ಅಲ್ಪಪ್ರಾಣ-ಮಹಾಪ್ರಾಣ ವ್ಯತ್ಯಾಸ ನೂರರಲ್ಲಿ ತೊಂಬತ್ತೊಂಬತ್ತು ಮಂದಿ ಕನ್ನಡಿಗರ ಓದಿನಲ್ಲಿ ಇಲ್ಲವೇ ಮಾತಿನಲ್ಲಿ ಕಾಣಿಸುವುದೇ ಇಲ್ಲ. ಮುಖ್ಯಮಂತ್ರಿ ಎಂಬುದು ಎಲ್ಲರ ಮಾತಿನಲ್ಲೂ ಮುಕ್ಯಮಂತ್ರಿ ಎಂದಾಗುತ್ತದೆ, ಪ್ರಧಾನ ಮತ್ತು ಪ್ರದಾನಗಳು ಇಲ್ಲವೇ ಮಧ್ಯ ಮತ್ತು ಮದ್ಯಗಳು ಒಂದೇ ರೀತಿಯಾಗಿ ಕೇಳಿಸುತ್ತವೆ.

ಈ ಬರಿಗೆಗಳನ್ನು ಕಲಿಸುವ ಸಮಯದಲ್ಲಿ ಕೆಲವರು ಕಲಿಸುಗರು (ಅದ್ಯಾಪಕರು) ಈ ಪದಜೋಡಿಗಳ ನಡುವಿನ ವ್ಯತ್ಯಾಸವನ್ನು ಕಲಿಯುವವರಿಗೆ ತಿಳಿಯುವಂತೆ ಹೇಳಿಕೊಡುತ್ತಿರಬಹುದು; ಆದರೆ, ಬೇರೆಲ್ಲಾ ಸಮಯದಲ್ಲೂ ಅವರ ಓದಿನಲ್ಲಿ ಇಲ್ಲವೇ ಮಾತಿನಲ್ಲಿ ಇವುಗಳ ನಡುವೆ ಯಾವ ವ್ಯತ್ಯಾಸವೂ ಕಾಣಿಸುವುದಿಲ್ಲ.

ಕೆಲವರು ಪಂಡಿತರು ಮಾತ್ರ ಇಂತಹ ಪದಗಳಲ್ಲಿ ಬರುವ ಮಹಾಪ್ರಾಣ ಬರಿಗೆಗಳನ್ನು ಸರಿಯಾಗಿ ಉಲಿಯುತ್ತಿರಬಹುದು; ಆದರೆ ಇದು ಕೇಳುವವರಿಗೆ ಸ್ವಲ್ಪ ವಿಚಿತ್ರವಾಗಿ ತೋರದಿರದು. ಇದಲ್ಲದೆ, ಅಂತಹ ಜನರೂ ಎಲ್ಲಾ ಕಡೆಗಳಲ್ಲೂ ಈ ರೀತಿ ಮಹಾಪ್ರಾಣ ಬರಿಗೆಗಳನ್ನು ಸರಿಯಾಗಿ ಉಲಿಯುವುದಿಲ್ಲ; ಎಚ್ಚರದಿಂದ ಈ ಪದಗಳನ್ನು ಬಳಸುವ ಕಡೆಗಳಲ್ಲಿ ಮಾತ್ರ ಹಾಗೆ ಉಲಿಯುತ್ತಾರೆ.

ಶ-ಷ, ಋ-ರು ಮೊದಲಾದ ಬೇರೆ ಕೆಲವು ವ್ಯತ್ಯಾಸಗಳೂ ಇದೇ ರೀತಿಯಲ್ಲಿ ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳ ಬರವಣಿಗೆಯಲ್ಲಿ ಕಾಣಿಸುತ್ತವೆ; ಆದರೆ, ಅವುಗಳ ಓದಿನಲ್ಲಿ ಕಾಣಿಸುವುದಿಲ್ಲ. ವಿಶೇಷ ಎಂಬುದಾಗಿ ಬರೆಯುತ್ತೇವೆ; ಆದರೆ ವಿಶೇಶ ಎಂಬುದಾಗಿ ಓದುತ್ತೇವೆ. ಋಷಿ ಎಂಬುದಾಗಿ ಬರೆಯುತ್ತೇವೆ; ಆದರೆ ರುಶಿ ಎಂಬುದಾಗಿ ಓದುತ್ತೇವೆ.

ಕೆಲವು ಮಂದಿ ಋಕಾರದ ಬದಲು ರು ಎಂಬುದನ್ನು ಬಳಸುವಾಗ ಅದರಲ್ಲಿರುವ ಉಕಾರವನ್ನು ತುಟಿಯನ್ನು ದುಂಡಗಾಗಿಸಿ ಉಲಿಯುವ ಬದಲು ಅಗಲಿಸಿ ಉಲಿಯುತ್ತಾರೆ; ಆದರೆ ಯಾರೂ (ಸಂಸ್ಕೃತ ಪಂಡಿತರೂ) ಋಕಾರವನ್ನು ಸಂಸ್ಕೃತದಲ್ಲಿರುವ ಹಾಗೆ ಒಂದು ಸ್ವರವಾಗಿ ಉಲಿಯುವುದಿಲ್ಲ.

ಸಂಸ್ಕೃತ ಪದಗಳಲ್ಲಿ ಕಾಣಿಸುವ ವಿಸರ್ಗವೂ ಹೀಗೆಯೇ. ಪದಗಳ ಕೊನೆಯಲ್ಲಿ ಅದನ್ನು ಹಕಾರವಾಗಿ ಉಲಿಯಲಾಗುತ್ತದೆ, ಮತ್ತು ಅದರ ಬಳಿಕ ಅದರ ಹಿಂದಿದ್ದ ತೆರೆಯುಲಿ(ಸ್ವರ)ಯನ್ನು ಇನ್ನೊಮ್ಮೆ ಉಲಿಯಲಾಗುತ್ತದೆ (ಬಹುಶಃ – ಬಹುಶಹ, ಕೃತಿಃ – ಕ್ರುತಿಹಿ), ಮತ್ತು ಪದಗಳ ನಡುವೆ ಬಂದಿರುವಲ್ಲಿ ಅದನ್ನು ಅದರ ಬಳಿಕ ಬರುವ ಮುಚ್ಚುಲಿ(ವ್ಯಂಜನ)ಯ ರೂಪದಲ್ಲಿ ಉಲಿಯುಲಾಗುತ್ತದೆ, ಇಲ್ಲವೇ ಹಕಾರವಾಗಿ ಮಾರ್ಪಡಿಸಲಾಗುತ್ತದೆ (ದುಃಖ – ದುಕ್ಖ, ಅಂತಃಪುರ – ಅಂತಪ್ಪುರ/ ಅಂತಹ್ಪುರ).

ಈ ರೀತಿ, ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನೆಲ್ಲ ನಾವು ಓದಿನ ಇಲ್ಲವೇ ಮಾತಿನ ಮಟ್ಟಿಗೆ ಕನ್ನಡದ ಪದ ಸ್ವರೂಪಕ್ಕೆ ಹೊಂದಿಕೆಯಾಗುವ ಹಾಗೆ ಹಲವು ಬಗೆಗಳಲ್ಲಿ ಮಾರ್ಪಡಿಸಿಕೊಂಡಿದ್ದೇವೆ; ಆದರೆ, ಬರಹದಲ್ಲಿ ಮಾತ್ರ ಇವನ್ನು ಸಂಸ್ಕೃತದಲ್ಲಿರುವ ಹಾಗೆಯೇ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೇವೆ.

ಕನ್ನಡದ ಬರವಣಿಗೆಯಲ್ಲಿ ಕಾಣಿಸುವ ಅಲ್ಪಪ್ರಾಣ–ಮಹಾಪ್ರಾಣ, ಋಕಾರ–ರುಕಾರ, ಷಕಾರ–ಶಕಾರ, ವಿಸರ್ಗ–ಹಕಾರ ಮೊದಲಾದ ಬರಿಗೆಜೋಡಿಗಳ ನಡುವಿನ ವ್ಯತ್ಯಾಸಗಳು ಕನ್ನಡಿಗರ ಓದಿನಲ್ಲಿ ಇಲ್ಲವೇ ಮಾತಿನಲ್ಲಿ ಕಾಣಿಸುವುದಿಲ್ಲವೆಂಬ ಮೇಲಿನ ಮಾತನ್ನು ನಾನು ವಿಸ್ತಾರವಾದ ಸಂಶೋದನೆಯ ನೆಲೆಯಲ್ಲಿ ಹೇಳುತ್ತಿದ್ದೇನಲ್ಲದೆ ಮೇಲ್ಮೇಲಿನ ಅವಲೋಕನದ ಇಲ್ಲವೇ ಊಹೆಯ ನೆಲೆಯಲ್ಲಿ ಹೇಳುತ್ತಿಲ್ಲ.

ನಾನು ಉಲಿಯರಿಮೆಯಲ್ಲಿ (ಫೊನೆಟಿಕ್ಸ್–ಧ್ವನಿವಿಜ್ಞಾನದಲ್ಲಿ) ಸಾಕಶ್ಟು ಪರಿಣತಿಯನ್ನು ಪಡೆದಿದ್ದೇನೆ ಮತ್ತು ಹಲವು ವರ್ಶ ಅದನ್ನು ಎಮ್. ಎ. ಕಲಿಗರಿಗೆ ಕಲಿಸಿದ್ದೇನೆ. ಅದರ ಮೇಲೆ

ಹಲವು ಸಂಶೋದನೆಗಳನ್ನೂ (ಇಂಗ್ಲೆಂಡಿನ ಲೀಡ್ಸ್ ಯುನಿವರ್‍ಸಿಟಿಯಲ್ಲಿ ಮತ್ತು ಅಮೆರಿಕಾದ ಸ್ಟಾನ್‌ಪರ್‍ಡ್ ಯುನಿವರ್‍ಸಿಟಿಯಲ್ಲಿ) ನಡೆಸಿದ್ದೇನೆ.

ಇದಲ್ಲದೆ, ಸುಮಾರು ಒಂದೂವರೆ ತಿಂಗಳಶ್ಟು ಸಮಯ ಮಯ್ಸೂರು ಜಿಲ್ಲೆಯಲ್ಲೆಲ್ಲ ಸುತ್ತಾಡಿ, ಅಲ್ಲಿನ ಬೇರೆ ಬೇರೆ ಜಾತಿ ಮತ್ತು ಪಂಗಡಗಳಿಗೆ ಸೇರಿದ ಜನರ ಮಾತುಗಳನ್ನು ಸಂಗ್ರಹಿಸಿ, ಅವುಗಳಲ್ಲಿ ಎಂತಹ ತೆರೆಯುಲಿ (ಸ್ವರ) ಮತ್ತು ಮುಚ್ಚುಲಿ(ವ್ಯಂಜನ)ಗಳು ಬಳಕೆಯಾಗುತ್ತವೆ ಎಂಬುದನ್ನು ಪರಿಶೀಲಿಸಿದ್ದೇನೆ.

ಹೆಚ್ಚುಕಡಿಮೆ ಇಂತಹದೇ ಪರಿಶೀಲನೆಯನ್ನು ದಕ್ಶಿಣ ಕನ್ನಡ ಮತ್ತು ಗುಲ್ಬರ್‍ಗ ಜಿಲ್ಲೆಗಳಲ್ಲೂ ನಡೆಸಿದ್ದೇನೆ. ಮೇಲಿನ ಬರಿಗೆಗಳನ್ನು ತಾವು ಸರಿಯಾಗಿಯೇ ಉಲಿಯುತ್ತೇವೆಂದು ಹೇಳಿಕೊಳ್ಳುವ ಹಲವು ಮಂದಿ ಪಂಡಿತರ ಮಾತನ್ನೂ ಗಮನವಿಟ್ಟು ಪರೀಕ್ಶಿಸಿದ್ದೇನೆ.

ಹಾಗಾಗಿ, ಮೇಲೆ ಕೊಟ್ಟಿರುವ ನನ್ನ ತೀರ್‍ಮಾನವನ್ನು ಅಂತಹದೇ ಪರಿಣತಿಯನ್ನು ಪಡೆಯದೆ ಮತ್ತು ಪರಿಶೀಲನೆಯನ್ನು ನಡೆಸದೆ ಸುಲಬವಾಗಿ ತಳ್ಳಿಹಾಕಲು ಬರುವುದಿಲ್ಲ.

ಓದಿಗೂ ಬರಹಕ್ಕೂ ನಡುವೆ ವ್ಯತ್ಯಾಸಗಳು ಕಾಣಿಸುವ ಕಡೆಗಳಲ್ಲೆಲ್ಲ ಸ್ಪೆಲ್ಲಿಂಗ್ ಸಮಸ್ಯೆಯಿದೆ ಎಂದರೆ, ಬರವಣಿಗೆಯ ಆಳ ಹೆಚ್ಚಿರುತ್ತದೆಂಯೆಂದು ಹೇಳಬಹುದು. ಇವನ್ನು ಹೋಗಲಾಡಿಸಬೇಕಾದಲ್ಲಿ ಓದು ಹೇಗಿದೆಯೋ ಹಾಗೆ ಬರಹವನ್ನೂ ಬದಲಾಯಿಸಿಕೊಳ್ಳುವುದೊಂದೇ ದಾರಿ.

ಕನ್ನಡ ಬರಹದಲ್ಲಿ ಸದ್ಯಕ್ಕೆ ಹೆಚ್ಚು ಸ್ಪೆಲ್ಲಿಂಗ್ ಸಮಸ್ಯೆಗಳಿಲ್ಲ. ಕನ್ನಡದವೇ ಆದ ಪದಗಳನ್ನು ಬರೆಯುುವಲ್ಲಿ ಯಾವ

ಸಮಸ್ಯೆಯೂ ಇಲ್ಲ. ಅಂತಹ ಪದಗಳನ್ನೆಲ್ಲ ನಾವು ಹೆಚ್ಚು ಕಡಿಮೆ ಓದುವ ಹಾಗೆಯೇ ಬರೆಯುತ್ತೇವೆ. ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಬರೆಯುವಲ್ಲಿ ಮಾತ್ರ ಹಲವು ಸಮಸ್ಯೆಗಳಿವೆ. ಅವನ್ನೆಲ್ಲ ಹೋಗಲಾಡಿಸಿಕೊಂಡಲ್ಲಿ ನಮ್ಮ ಬರಹ ಬಹಳ ಮಟ್ಟಿಗೆ ಸ್ಪೆಲ್ಲಿಂಗ್ ಸಮಸ್ಯೆಯಿಲ್ಲದ ಬರಹವಾಗಬಲ್ಲುದು.

## ೨.೪ ಕನ್ನಡ ಬರವಣಿಗೆಯ ಹಿನ್ನಡವಳಿ (ಚರಿತ್ರೆ)

ಕನ್ನಡ ಬರಹದಲ್ಲಿ, ಮೇಲೆ ವಿವರಿಸಿದ ಹಾಗೆ, ಸಂಸ್ಕೃತ ಪದಗಳನ್ನು ಸಂಸ್ಕೃತದಲ್ಲಿರುವ ಹಾಗೆಯೇ ಬರೆಯುತ್ತಿರುವುದಕ್ಕೆ ಕನ್ನಡ ಬರವಣಿಗೆಯ ಹಿನ್ನಡವಳಿಯೂ ಒಂದು ಕಾರಣ.

ಸಂಸ್ಕೃತ, ಪಾಲಿ, ಪ್ರಾಕೃತ ಮೊದಲಾದ ಇಂಡೋ-ಆರ್ಯನ್ ನುಡಿಗಳನ್ನು ಬರಹಕ್ಕಿಳಿಸುವುದಕ್ಕಾಗಿ ತಯಾರಾಗಿದ್ದ ಬ್ರಾಹ್ಮೀ ಬರವಣಿಗೆಯಿಂದ ಕನ್ನಡ ಬರವಣಿಗೆ ಬೆಳೆದು ಬಂದಿದೆ.

ಇದನ್ನು ತಮ್ಮ ನುಡಿಗೆ ಅಳವಡಿಸಿಕೊಳ್ಳುವ ಸಮಯದಲ್ಲಿ ಕನ್ನಡ ಬರಹಗಾರರು ಅದರಲ್ಲಿ ತಮ್ಮ ನುಡಿಗೆ ಬೇಕಾಗುವ ಕೆಲವು ಹೆಚ್ಚಿನ ಬರಿಗೆಗಳನ್ನು (ಎ, ಒ, ಱ ಮತ್ತು ೞಗಳನ್ನು) ಹೊಸದಾಗಿ ಉಂಟುಮಾಡಿ ಸೇರಿಸಿಕೊಂಡಿದ್ದರು.

ಆದರೆ, ಇವುಗಳೊಂದಿಗೆ ಕನ್ನಡಕ್ಕೆ (ಹಳೆಗನ್ನಡಕ್ಕೆ) ಬೇಡವಾದರೂ ಕನ್ನಡದಲ್ಲಿ ಬಳಕೆಯಾಗುವ ಸಂಸ್ಕೃತದ ಎರವಲು ಪದಗಳನ್ನು ಬರೆಯಲು ಬೇಕಾಗುವ ಮಹಾಪ್ರಾಣ ಬರಿಗೆಗಳು (ಖಛಠಥಫ ಮತ್ತು ಘಝಢಧಭ), ಋ, ಶ, ಷ, ಐ, ಔ, ಅನುಸ್ವಾರ (ಂ) ಮತ್ತು ವಿಸರ್ಗ (ಃ) ಎಂಬವುಗಳನ್ನೂ ಉಳಿಸಿಕೊಂಡಿದ್ದರು.

ಇದರಿಂದಾಗಿ, ಅಂತಹ ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಕನ್ನಡ ಬರಹಗಳಲ್ಲಿ ಹೆಚ್ಚುಕಡಿಮೆ ಸಂಸ್ಕೃತದಲ್ಲಿ ಇರುವ ಹಾಗೆಯೇ ಬರೆಯಲು ಬರುತ್ತಿದೆ.

ಕನ್ನಡ ಬರಹಗಾರರ ಈ ಆಯ್ಕೆಯಿಂದಾಗಿ, ಇವತ್ತಿನ ಕನ್ನಡ ಬರಹಗಳಲ್ಲಿ ಪದಗಳ ಓದಿಗೂ ಅವುಗಳ ಬರವಣಿಗೆಗೂ ನಡುವೆ ಹಲವು ಬಗೆಯ ವ್ಯತ್ಯಾಸಗಳು ಕಾಣಿಸುವ ಹಾಗಾಗಿದೆ. ಎರವಲಾಗಿ ಪಡೆದ ಸಂಸ್ಕೃತ ಪದಗಳನ್ನು ಓದುವಾಗ, ಇಲ್ಲವೇ ಮಾತಿನಲ್ಲಿ ಬಳಸುವಾಗ ಕನ್ನಡ ಪದಗಳ ಸ್ವರೂಪಕ್ಕೆ ಹೊಂದಿಕೊಳ್ಳುವ ಹಾಗೆ ಅವುಗಳಲ್ಲಿ ಹಲವು ಬಗೆಯ ಮಾರ್ಪಾಡುಗಳನ್ನು ಮಾಡಿಕೊಳ್ಳಲಾಗುತ್ತದೆ. ಆದರೆ ಬರೆಯುವಾಗ ಮಾತ್ರ, ಅವನ್ನು ಹೆಚ್ಚುಕಡಿಮೆ ಸಂಸ್ಕೃತದಲ್ಲಿರುವ ಹಾಗೆಯೇ ಬರೆಯಬೇಕಾಗಿದೆ.

### ೨.೫ ಎರವಲು ಪದಗಳ ಬರವಣಿಗೆ

ಕನ್ನಡಕ್ಕೆ ಹಲವು ನುಡಿಗಳಿಂದ ಪದಗಳು ಎರವಲಾಗಿ ಬಂದಿವೆ, ಮತ್ತು ಇಂತಹ ಪದಗಳನ್ನು ಬರೆಯುವಲ್ಲಿ ನಾವು ಅವುಗಳ ಉಲಿಪಿಗೇನೇ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದೇವೆ. ಹಾಗಾಗಿ, ಇಂತಹ ಪದಗಳ ಬರವಣಿಗೆಯಲ್ಲೂ ಓದುವ ಹಾಗೆಯೇ ಬರೆಯುವ ಮತ್ತು ಬರೆದ ಹಾಗೆಯೇ ಓದುವ ಅನುವು ಕನ್ನಡಿಗರಿಗಿದೆ.

ಎತ್ತುಗೆಗೆ, ಇಂಗ್ಲಿಶ್‌ನಿಂದ ಎರವಲಾಗಿ ಪಡೆದ ಪದಗಳನ್ನು ನಾವು ಆ ನುಡಿಯಲ್ಲಿರುವ ಹಾಗೆ ಬರೆಯುವುದಿಲ್ಲ. ಅದಕ್ಕೆ ಬೇಕಾಗುವ ಬರಿಗೆಗಳು ನಮ್ಮ ಬರವಣಿಗೆಯಲ್ಲಿಲ್ಲದಿರುವುದು ಇದಕ್ಕೆ ಕಾರಣ. ಆ ಪದಗಳನ್ನು ನಾವು ಹೇಗೆ ಓದುತ್ತೇವೆಯೋ ಹಾಗೆಯೇ ಬರೆಯುತ್ತೇವೆ:

## ೨ ಓದುವ ಹಾಗೆ ಬರೆಯುವುದು

ಟಂಬ್ಸ್, ಟೀವಿ, ರೇಡಿಯೋ, ಡಾಕ್ಟರ್, ಡ್ಯೂಟಿ ಮೊದಲಾದ ಪದಗಳಲ್ಲಿ ಕಾಣಿಸುವ ಟಕಾರ–ಡಕಾರಗಳು ಇಂಗ್ಲಿಶ್‌ನಲ್ಲಿಲ್ಲ. ಈ ಪದಗಳನ್ನು ನಾವು ಟಕಾರ–ಡಕಾರಗಳನ್ನು ಬಳಸಿ ಓದುತ್ತೇವೆ, ಮತ್ತು ಹಾಗೆಯೇ ಬರೆಯುತ್ತೇವೆ.

ಮದರ್, ಬ್ರದರ್, ಪೆದರ್ ಮೊದಲಾದ ಬೇರೆ ಕೆಲವು ಪದಗಳಲ್ಲಿ ನಾವು ದಕಾರವನ್ನು ಬಳಸುತ್ತೇವೆ; ಆದರೆ ಇಲ್ಲೂ ದಕಾರ ನಮ್ಮ ಓದಿನಲ್ಲಿದೆಯಲ್ಲದೆ ಇಂಗ್ಲಿಶ್‌ನಲ್ಲಿಲ್ಲ. ವಯ್ರಸ್ ಮತ್ತು ವಯ್ಪರ್ ಪದಗಳ ಮೊದಲನೆಯ ಬರಿಗೆಯನ್ನು ನಾವು ಒಂದೇ ರೀತಿಯಲ್ಲಿ ಉಲಿಯುತ್ತೇವೆ ಮತ್ತು ಒಂದೇ ರೀತಿಯಾಗಿ ಬರೆಯುತ್ತೇವೆ. ಆದರೆ, ಇಂಗ್ಲಿಶ್‌ನ virus ಮತ್ತು wiper ಎಂಬ ಈ ಎರಡು ಪದಗಳಲ್ಲಿ ಮತ್ತು ಇಂತಹವೇ ಬೇರೆ ಹಲವು ಪದಜೋಡಿಗಳಲ್ಲಿ ಮೊದಲಿಗೆ ಬರುವ ಬರಿಗೆಗಳು ಇಂಗ್ಲಿಶ್ ನುಡಿಗರ ಬರಹದಲ್ಲಶ್ಟೇ ಅಲ್ಲದೆ ಓದಿನಲ್ಲೂ ಬೇರೆ ಬೇರಾಗಿವೆ.

ಈ ರೀತಿ ಹೆಚ್ಚಿನೆಡೆಗಳಲ್ಲೂ ಇಂಗ್ಲಿಶ್ ಎರವಲು ಪದಗಳನ್ನು ನಾವು ಓದುವ ಹಾಗೆಯೇ ಬರೆಯುತ್ತೇವಲ್ಲದೆ ಇಂಗ್ಲಿಶ್‌ನಲ್ಲಿರುವ ಹಾಗೆ, ಇಲ್ಲವೇ ಇಂಗ್ಲಿಶ್ ನುಡಿಗರು ಓದುವ ಹಾಗೆ ಬರೆಯುವುದಿಲ್ಲ.

ಇದಕ್ಕೆ ಕೆಲವು ಹೊರಪಡಿಕೆಗಳೂ ಇವೆ. ಎತ್ತುಗೆಗೆ, ಇಂಗ್ಲಿಶ್ ಎಂಬ ಪದವನ್ನೇ ಗಮನಿಸಬಹುದು: ಅದನ್ನು ಇಂಗ್ಲಿಷ್ ಎಂಬುದಾಗಿ ಬರೆಯಲಾಗುತ್ತದೆ; ಆದರೆ, ನಿಜಕ್ಕೂ ಅದನ್ನು ಹೆಚ್ಚಿನವರೂ ಇಂಗ್ಲಿಶ್ ಎಂಬುದಾಗಿಯೇ ಉಲಿಯುತ್ತಾರೆ. ಇಂಗ್ಲಿಶ್ ನುಡಿಗರ ಉಲಿಪಿನಲ್ಲೂ ಈ ಪದದ ಕೊನೆಯ ಉಲಿ ಶ್ ಎಂಬುದಾಗಿಯೇ ಇದೆ!

ಬೇರೆಯೂ ಕೆಲವು ಇಂಗ್ಲಿಶ್ ಎರವಲು ಪದಗಳಲ್ಲಿ ಷಕಾರವನ್ನು ಬಳಸಲಾಗುತ್ತಿದೆ; ಎತ್ತುಗೆಗೆ, -tion ಎಂಬ ಒಟ್ಟಿನಲ್ಲಿ ಕೊನೆಗೊಳ್ಳುವ ಪದಗಳನ್ನು ಬರೆಯುವಾಗ ಷಕಾರವನ್ನು ಬಳಸಲಾಗುತ್ತದೆ (ಇನ್ವೆಸ್ಟಿಗೇಷನ್, ರಿಪ್ರೊಡಕ್ಷನ್, ಡಿಸ್ಟ್ರಿಬ್ಯೂಷನ್). ಇಲ್ಲೂ ಕೂಡ ಇಂಗ್ಲಿಶ್ ನುಡಿಗರ ಉಲಿಪಿನಲ್ಲಿ ಶ್ ಎಂಬುದೇ ಇದೆ, ಮತ್ತು ಹೆಚ್ಚಿನ ಕನ್ನಡಿಗರ ಉಲಿಪಿನಲ್ಲೂ ಶ್ ಎಂಬುದಿದೆ.

ಥಕಾರ ಮತ್ತು ಫಕಾರಗಳೆಂಬ ಎರಡು ಮಹಾಪ್ರಾಣ ಬರಿಗೆಗಳನ್ನೂ ಇಂಗ್ಲಿಶ್ ಎರವಲುಗಳನ್ನು ಬರೆಯುವಲ್ಲಿ ಬಳಸಲಾಗುತ್ತದೆ (ಥಿಯರಿ, ಥಿಯೇಟರ್, ಆಫೀಸ್, ಕಾಫಿ). ಆದರೆ, ಹೆಚ್ಚಿನ ಕನ್ನಡಿಗರ ಉಲಿಪಿನಲ್ಲೂ ಇವು ತಕಾರ ಮತ್ತು ಪಕಾರಗಳೆಂಬ ಅಲ್ಪಪ್ರಾಣ ಉಲಿಗಳಾಗಿಯೇ ಕಾಣಿಸಿಕೊಳ್ಳುತ್ತವೆ.

ಇದಲ್ಲದೆ, ಇಂಗ್ಲಿಶ್ ನುಡಿಗರ ಉಲಿಪಿನಲ್ಲಿಯೂ ಇವು ಮಹಾಪ್ರಾಣ ಉಲಿಗಳಾಗಿ ಕಾಣಿಸಿಕೊಳ್ಳುವುದಿಲ್ಲ; ಇದಕ್ಕೆ ಬದಲು, ಅವೆರಡೂ ಉಜ್ಜುಲಿ(fricative)ಗಳಾಗಿ ಕಾಣಿಸಿಕೊಳ್ಳುತ್ತವೆ. ಕೆಲವು ಮಂದಿ ಕನ್ನಡಿಗರೂ ಇವುಗಳಲ್ಲಿ ಫಕಾರವನ್ನು ಒಂದು ಉಜ್ಜುಲಿಯಾಗಿ ಉಲಿಯುತ್ತಾರೆ. ಆದರೆ, ಇದನ್ನು ಬರೆಯಲು ಫ಼್ ಎಂಬ ಬೇರೆಯೇ ಬರಿಗೆ ಬಳಕೆಯಲ್ಲಿದೆ (ಆಫ಼ೀಸ್, ಕಾಫ಼ಿ). ಹಾಗಾಗಿ, ಇವನ್ನು ಮಹಾಪ್ರಾಣ ಬರಿಗೆಗಳನ್ನು ಬಳಸಿ ಬರೆಯುವುದಕ್ಕೆ ಯಾವ ಆದಾರವೂ ಇಲ್ಲ.

ಹಿಂದಿ, ಮರಾಟಿ, ಉರ್ದು, ತಮಿಳು ಮೊದಲಾದ ಬೇರೆ ನುಡಿಗಳಿಂದ ಎರವಲಾಗಿ ಪಡೆದ ಪದಗಳನ್ನೂ ನಾವು ಹೆಚ್ಚುಕಡಿಮೆ ಹೇಗೆ ಓದುತ್ತೇವೆಯೋ ಹಾಗೆಯೇ ಬರೆಯುತ್ತೇವಲ್ಲದೆ ಆ ನುಡಿಗಳಲ್ಲಿ ಹೇಗೆ ಬರೆಯುತ್ತಾರೋ ಹಾಗೆ ಬರೆಯುವುದಿಲ್ಲ.

## ೨ ಓದುವ ಹಾಗೆ ಬರೆಯುವುದು

ಉರ್ದು ಇಲ್ಲವೇ ಅರೇಬಿಕ್-ಪರ್ಶಿಯನ್‌ಗಳಿಂದ ಎರವಲಾಗಿ ಪಡೆದ ದಾಖಲೆ, ಠಾಣೆ, ಘರಾನಾ ಮೊದಲಾದ ಕೆಲವು ಪದಗಳಲ್ಲಿ ಮಹಾಪ್ರಾಣ ಬರಿಗೆಗಳು ಕಾಣಿಸಿಕೊಳ್ಳುತ್ತವೆ. ಆದರೆ, ಉಲಿಪಿನಲ್ಲಿ ಇವೂ ಕೂಡ ಅಲ್ಪಪ್ರಾಣ ಬರಿಗೆಗಳಾಗಿಬಿಡುತ್ತವೆ. ಹಾಗಾಗಿ, ಅವನ್ನೂ ಮಹಾಪ್ರಾಣ ಬರಿಗೆಗಳಾಗಿ ಬರೆಯ ಬೇಕೆಂದಿಲ್ಲ.

ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಮಾತ್ರ ನಾವು ಹೇಗೆ ಓದುತ್ತೇವೆಯೋ ಹಾಗೆ ಬರೆಯದೆ ಸಂಸ್ಕೃತ ನುಡಿಯಲ್ಲಿ ಅವು ಹೇಗೆ ಇವೆಯೋ ಹಾಗೆ ಬರೆಯಬೇಕಾಗಿದೆ. ಕನ್ನಡ ಬರಹ ಇವತ್ತು ಸಾಮಾನ್ಯ ಕನ್ನಡಿಗರಿಂದ ದೂರ ಉಳಿಯುತ್ತಿರುವುದಕ್ಕೆ ಅದರಲ್ಲಿ ಸಂಸ್ಕೃತ ಪದಗಳಿಗೆ ಈ ರೀತಿ ಅನವಶ್ಯಕವಾಗಿ ಒಂದು ಹೆಚ್ಚಿನ ಸ್ಥಾನವನ್ನು ಕೊಟ್ಟಿರುವುದು ಒಂದು ಮುಕ್ಯವಾದ ಕಾರಣ.

ಯಾಕೆಂದರೆ, ಕನ್ನಡ ಬರಹವನ್ನು ಕಲಿಯುವಾಗ ಹಲವಾರು ಓದಿನಲ್ಲಿ ಕಾಣಿಸದಿರುವ ಬರಿಗೆಗಳನ್ನು ಮಕ್ಕಳು ಕಲಿಯ ಬೇಕಾಗಿದೆ. ಇದರಿಂದಾಗಿ, ಕನ್ನಡ ಬರಹವನ್ನು ಕಲಿತು ಅದನ್ನು ತಮ್ಮ ದಿನನಿತ್ಯದ ಜೀವನದಲ್ಲಿ ಬಳಸುವ ಕೆಲಸ ಅವರ ಮಟ್ಟಿಗೆ ಹೆಚ್ಚು ತೊಡಕಿನದಾಗಿದೆ.

ಎತ್ತುಗೆಗೆ, ಶಾಲೆಗಳಲ್ಲಿ ಕನ್ನಡ ಬರಹವನ್ನು ಕಲಿಯ ಹೊರಡುವ ಚಿಕ್ಕ ಮಕ್ಕಳಿಗೆ ಕನ್ನಡಕ್ಕೆ ಅವಶ್ಯವಿಲ್ಲದ ಛ, ಝ, ಠ ಮೊದಲಾದ ಬರಿಗೆಗಳನ್ನು ಕಲಿಸುವುದಕ್ಕಾಗಿ ಕನ್ನಡದಲ್ಲೆಲ್ಲೂ ಕಾಣಿಸದಂತಹ ಛಗ (ಹೋತ), ಛದ (ಮುಚ್ಚಳ), ಖರ (ಹೇಸರಗತ್ತೆ), ಊಷರ (ಸವುಳು ನೆಲ) ಮೊದಲಾದ ಪದಗಳನ್ನು ಕಲಿಸಬೇಕಾಗಿದೆ.

ಈ ಪದಗಳನ್ನು ಅವರು ಮುಂದೆಂದೂ ತಮ್ಮ ಜೀವನದಲ್ಲಿ ಓದುವ ಇಲ್ಲವೇ ಬರೆಯುವ ಸಂದರ್ಬಗಳು ಬರಲಾರವೆಂದೇ ಹೇಳಬಹುದು. ಕನ್ನಡದಲ್ಲಿಲ್ಲದ ಈ ಹೆಚ್ಚಿನ ಬರಿಗೆಗಳನ್ನು ಕಲಿಸುವುದಕ್ಕಾಗಿ ಅವನ್ನು ಚಿಕ್ಕ ಮಕ್ಕಳ ಮೇಲೆ ಹೇರಲಾಗುತ್ತದೆ.

## ೨.೬ ಸಂಸ್ಕ್ರುತದ ಎರವಲು ಪದಗಳ ಬರವಣಿಗೆ

ಹಳೆಗನ್ನಡದ ಕಾಲದಲ್ಲಿ, ಮತ್ತು ಅಮೇಲೆಯೂ ಇತ್ತೀಚೆಗಿನ ವರೆಗೆ, ಸಂಸ್ಕ್ರುತ ಎರವಲುಗಳಲ್ಲಿ ಹಲವನ್ನು ಕನ್ನಡದ ಉಲಿಪಿಗೆ ಹೊಂದಿಕೆಯಾಗುವಂತೆ ತದ್ಬವಗಳಾಗಿ ಮಾರ್ಪಡಿಸಿ ಬಳಸುವ ಆಯ್ಕೆ ಬರಹಗಾರರಿಗಿತ್ತು. ಇದರಿಂದಾಗಿ, ಇಂತಹ ಪದಗಳ ಬರವಣಿಗೆಯಲ್ಲೂ ಓದು–ಬರಹಗಳ ನಡುವೆ ಹೆಚ್ಚಿನ ವ್ಯತ್ಯಾಸ ಗಳಿರಲಿಲ್ಲ.

ಆದರೆ ಇತ್ತೀಚೆಗೆ, ಕನ್ನಡ ಬರಹದಲ್ಲಿ ಬಳಕೆಯಾಗುವ ಹೆಚ್ಚಿನ ಸಂಸ್ಕ್ರುತ ಎರವಲುಗಳನ್ನೂ ಸಂಸ್ಕ್ರುತದಲ್ಲಿರುವ ಹಾಗೆಯೇ ಬರೆಯಲಾಗುತ್ತಿದೆ, ಮತ್ತು ಹಾಗೆ ಬರೆಯದಿರುವುದು, ಮತ್ತು ಉಲಿಪಿಗೆ ಅನುಸಾರವಾಗಿ ಅವುಗಳ ಬರವಣಿಗೆಯನ್ನು ಮಾರ್ಪಡಿಸುವುದು ತಪ್ಪೆಂದು ತಿಳಿಯಲಾಗುತ್ತಿದೆ. ಇದರಿಂದಾಗಿ, ಇಂತಹ ಪದಗಳ ಮಟ್ಟಿಗೆ ಇವತ್ತು ಕನ್ನಡ ಬರವಣಿಗೆಯಲ್ಲಿ ಓದಿಗೂ ಬರಹಕ್ಕೂ ನಡುವೆ ಹಲವು ವ್ಯತ್ಯಾಸಗಳು ಕಾಣಿಸಿ ಕೊಳ್ಳುತ್ತಿವೆ.

ಈ ವ್ಯತ್ಯಾಸಗಳನ್ನು ಹೋಗಲಾಡಿಸುವುದಕ್ಕಾಗಿ ಕನ್ನಡ ಬರವಣಿಗೆಯಲ್ಲಿ ಇವತ್ತು ಕೆಲವು ಮಾರ್ಪಾಡುಗಳನ್ನು ಮಾಡಿಕೊಳ್ಳ ಬೇಕಾಗಿದೆ. ಬೇರೆಲ್ಲಾ ಎರವಲು ಪದಗಳ ಹಾಗೆ, ಸಂಸ್ಕ್ರುತದ ಎರವಲು ಪದಗಳನ್ನೂ ಹೆಚ್ಚಿನ ಕನ್ನಡಿಗರೂ ಹೇಗೆ ಉಲಿಯುತ್ತಾರೋ ಹಾಗೆ ಬರೆಯಬೇಕು.

## ೨ ಓದುವ ಹಾಗೆ ಬರೆಯುವುದು

(೧) ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳಲ್ಲಿ ಬರುವ ಮಹಾಪ್ರಾಣ ಬರಿಗೆಗಳನ್ನು ಹೆಚ್ಚಿನ ಕನ್ನಡಿಗರೂ ಅಲ್ಪಪ್ರಾಣ ಬರಿಗೆಗಳಾಗಿ ಉಲಿಯುತ್ತಾರೆ. ಹಾಗಾಗಿ, ಅಂತಹ ಪದಗಳನ್ನು ಬರೆಯುವಾಗ ಅವನ್ನು ಅಲ್ಪಪ್ರಾಣ ಬರಿಗೆಗಳಾಗಿಯೇ ಬರೆಯಲು ಸಾದ್ಯವಾಗಬೇಕು. ಈ ಒಂದು ಬದಲಾವಣೆಯ ಮೂಲಕ ಕನ್ನಡ ಬರಹಗಳಲ್ಲಿ ಇವತ್ತು ಕಡ್ಡಾಯವಾಗಿ ಬಳಕೆಯಾಗುತ್ತಿರುವ ಹತ್ತು ಬರಿಗೆಗಳನ್ನು (ಖಛಠಥಫ ಮತ್ತು ಘಝಢಧಭಗಳನ್ನು) ಬದಿಗಿರಿಸಬಹುದು.

(೨) ಕನ್ನಡ ಬರಹದಲ್ಲಿರುವ ಙಞಣನಮಗಳೆಂಬ ಅಯ್ದು ಮೂಗುಲಿ(ಅನುನಾಸಿಕ)ಗಳಲ್ಲಿ ಙ-ಞಗಳೆಂಬ ಮೊದಲಿನ ಎರಡು ಮೂಗುಲಿಗಳನ್ನು ಬಳಸದಿರಲು ಬರುತ್ತವೆ. ಯಾಕೆಂದರೆ, ಕನ್ನಡ ಪದಗಳಲ್ಲಿ ಅವು ಬೇರೆ ಮುಚ್ಚುಲಿಗಳ ಮೊದಲಶ್ಟೇ ಬರುತ್ತವೆ ಮತ್ತು ಆ ಜಾಗದಲ್ಲಿ ಎಲ್ಲಾ ಮೂಗುಲಿಗಳನ್ನೂ ಂ ರೂಪದಲ್ಲಿ ಕಾಣಿಸಲಾಗುತ್ತದೆ.

ಅವು ತಮ್ಮದೇ ಆದ ರೂಪದಲ್ಲಿ ಕಾಣಿಸುವುದು ಸಂಸ್ಕೃತ ದಿಂದ ಎರವಲಾಗಿ ಪಡೆದ ಅಜ್ಞಾನ, ವಾಙ್ಮಯ ಮೊದಲಾದ ಕೆಲವೇ ಕೆಲವು ಪದಗಳಲ್ಲಿ ಮಾತ್ರ. ಇಂತಹ ಪದಗಳಲ್ಲಿ ಞಕಾರವನ್ನು ನಕಾರವಾಗಿ (ಅಜ್ನಾನ, ಜ್ನಾತಿ) ಮತ್ತು ಙಕಾರವನ್ನು ಗಕಾರವಾಗಿ (ವಾಗ್ಮಯ) ಬರೆಯಬಹುದು.

(೩) ಋಕಾರವನ್ನು ಒಂದು ತೆರೆಯುಲಿ (ಸ್ವರ) ಎಂಬುದಾಗಿ ತಿಳಿಯಲಾಗಿದೆ. ಸಂಸ್ಕೃತದಲ್ಲಿ ಅದು ಒಂದು ತೆರೆಯುಲಿಯಾಗಿ ಬಳಕೆಯಾಗುತ್ತಿದ್ದುದೇ ಇದಕ್ಕೆ ಕಾರಣ. (ಸಂಸ್ಕೃತದಲ್ಲಿ ಅದಕ್ಕೆ ೠ ಎಂಬ ಉದ್ದ ರೂಪವೂ ಇದೆ). ಆದರೆ, ಕನ್ನಡಿಗರು ಅದನ್ನು ರು ಇಲ್ಲವೇ ರಿ ಎಂಬುದಾಗಿ ರಕಾರಕ್ಕೆ ಉಕಾರ ಇಲ್ಲವೇ ಇಕಾರವನ್ನು ಸೇರಿಸಿ ಉಲಿಯುತ್ತಾರೆ. ಬೇರೆ ಕೆಲವರು ರಕಾರಕ್ಕೆ

ಬೇರೊಂದು ರೀತಿಯ (ತುಟಿಯನ್ನು ಅಗಲಿಸಿ ಉಲಿಯುವ) ಉಕಾರವನ್ನು ಸೇರಿಸಿಯೂ ಅದನ್ನು ಉಲಿಯುತ್ತಾರೆ.

ಆದರೆ, ಯಾರೂ (ಸಂಸ್ಕೃತ ಪಂಡಿತರೂ) ಋಕಾರವನ್ನು ಒಂದು ತೆರೆಯುಲಿಯಾಗಿ ಉಲಿಯುವುದಿಲ್ಲ.

ಈ ತೆರೆಯುಲಿಯ ಉಲಿಪು ಹೇಗಿರಬಲ್ಲುದು ಎಂಬುದನ್ನು ತಿಳಿಯಲು ಸಂಸ್ಕೃತದ ಕೃತಿ ಪದವನ್ನು ಪರಿಶೀಲಿಸಬಹುದು. ಈ ಪದದ ಉಲಿಪಿನಲ್ಲಿ ಋ ಎಂಬ ತೆರೆಯುಲಿ ಬಂದಿದೆಯೆಂದು ಹೇಳಬೇಕಾದರೆ, ಕಕಾರ ಮತ್ತು ತಕಾರಗಳ ನಡುವೆ ರಕಾರ ಮಾತ್ರ ಇರಬೇಕು ಮತ್ತು ಆ ಪದ ಎರಡು ಉಲಿಕಂತೆ (syllable)ಗಳಿಂದ ಕೂಡಿರಬೇಕು.

ಕನ್ನಡಿಗರ (ಮತ್ತು ಸಂಸ್ಕೃತ ಪಂಡಿತರ) ಉಲಿಪಿನಲ್ಲಿ ಈ ಪದ ಎರಡು ಉಲಿಕಂತೆಗಳಿಂದ ಕೂಡಿರುತ್ತದೆಯೇನೋ ನಿಜ; ಆದರೆ, ಕಕಾರ ಮತ್ತು ತಕಾರಗಳ ನಡುವೆ ರಕಾರದೊಂದಿಗೆ ಒಂದು ತೆರೆಯುಲಿಯೂ (ದುಂಡಗಿನ ಉಕಾರ, ತುಟಿ ಅಗಲಿಸಿದ ಉಕಾರ ಇಲ್ಲವೆ ಇಕಾರ) ಬಂದಿರುತ್ತದೆ.

(೪) ಷಕಾರವೂ ಇದೇ ರೀತಿಯಲ್ಲಿ ಹೆಚ್ಚಿನವರ ಮಾತಿನಲ್ಲೂ ಶಕಾರವಾಗಿ ಕಾಣಿಸಿಕೊಳ್ಳುತ್ತದೆ. ಕೆಲವರ ಮಾತಿನಲ್ಲಿ ಷಕಾರ ಮತ್ತು ಶಕಾರಗಳೆರಡೂ ಸಕಾರವಾಗಿ ಕಾಣಿಸಿಕೊಳ್ಳುತ್ತವೆ ಯೆಂಬುದು ಬೇರೆಯೇ ವಿಶಯ; ಅದು ತಪ್ಪು ಎಂಬುದಾಗಿ ಶಾಲೆಗಳಲ್ಲಿ ಹೇಳಿಕೊಡಲಾಗುತ್ತದೆ. ಆದರೆ, ಶಕಾರ ಮತ್ತು ಷಕಾರಗಳ ನಡುವಿನ ವ್ಯತ್ಯಾಸ ಉಲಿಪಿನಲ್ಲಿ ಕಾಣಿಸದಿರುವುದನ್ನು ಹೆಚ್ಚಿನವರೂ ತಪ್ಪೆಂಬುದಾಗಿ ತಿದ್ದಲುಹೋಗುವುದಿಲ್ಲ.

ಶಕಾರ ಮತ್ತು ಷಕಾರಗಳ ನಡುವೆ ಉಲಿಪಿನಲ್ಲಿ ವ್ಯತ್ಯಾಸ ವಿದೆಯೆಂದು ಹೇಳಬೇಕಿದ್ದಲ್ಲಿ, ತಕಾರ ಮತ್ತು ಟಕಾರಗಳನ್ನು

ಉಲಿಯುವಾಗ ಯಾವ ರೀತಿಯಲ್ಲಿ ನಾಲಿಗೆ ಬಾಯಿಯ ಮೇಲ್ಬಾಗದ (ಅಂಗುಳಿನ) ಹತ್ತಿರ ಹೋಗುತ್ತದೆಯೋ ಅದೇ ರೀತಿಯಲ್ಲಿ ಶಕಾರ-ಷಕಾರಗಳನ್ನು ಉಚ್ಚರಿಸುವಾಗಲೂ ಹೋಗಬೇಕು.

ತಕಾರವನ್ನು ಉಲಿಯುವಾಗ ಅಂಗುಳನ್ನು ನಾಲಿಗೆಯ ಮೇಲ್ಬಾಗ ಮುಟ್ಟುತ್ತದೆ ಮತ್ತು ಟಕಾರವನ್ನು ಉಲಿಯುವಾಗ ನಾಲಿಗೆಯ ಅಡಿಬಾಗ ಮುಟ್ಟುತ್ತದೆ. ಇದಕ್ಕಾಗಿ ಟಕಾರವನ್ನು ಉಲಿಯುವಾಗ ನಾಲಿಗೆ ಒಳಕ್ಕೆ ಮಡಿಚಿಕೊಳ್ಳುತ್ತದೆ.

ಆದರೆ, ಹೆಚ್ಚಿನ ಕನ್ನಡಿಗರ ಮಾತಿನಲ್ಲೂ ಶಕಾರ ಮತ್ತು ಷಕಾರಗಳ ಉಲಿಪಿನಲ್ಲಿ ಇಂತಹ ವ್ಯತ್ಯಾಸ ಕಾಣಿಸಿಕೊಳ್ಳುವುದಿಲ್ಲ. ಅವೆರಡನ್ನೂ ಒಂದೇ ರೀತಿಯಲ್ಲಿ ಉಲಿಯಲಾಗುತ್ತದೆ. ವಿಷ, ವಿಶೇಷ, ಆಕರ್ಷಕ ಮೊದಲಾದ ಪದಗಳಲ್ಲಿ ಬರುವ ಷಕಾರವನ್ನು ಉಲಿಯುವಾಗ ಟಕಾರದ ಉಲಿಪಿನಲ್ಲಿ ಕಾಣಿಸುವ ಹಾಗೆ ನಾಲಿಗೆ ಒಳಕ್ಕೆ ಮಡಿಚಿಕೊಳ್ಳುವುದಿಲ್ಲ. ಹಾಗಾಗಿ ಅವನ್ನು ವಿಶ, ವಿಶೇಶ, ಆಕರ್ಶಕ ಎಂಬುದಾಗಿ ಬರೆಯುವುದರಲ್ಲಿ ಯಾವ ತೊಂದರೆಯೂ ಇಲ್ಲ.

ಕಷ್ಟ, ನಷ್ಟ, ಕೃಷ್ಣ ಮೊದಲಾದ ಪದಗಳು ಇವಕ್ಕೆ ಹೊರಪಡಿಕೆಗಳು. ಅವುಗಳಲ್ಲಿ ಬರುವ ಷಕಾರವನ್ನು ಉಲಿಯುವಾಗ ಹಲವರಲ್ಲಿ ನಾಲಿಗೆ ಒಳಕ್ಕೆ ಮಡಿಚಿಕೊಳ್ಳುತ್ತದೆ. ಆದರೆ ಇವಕ್ಕೆ ಷಕಾರದ ಬಳಿಕ ಬರುವ ಟಕಾರ ಮತ್ತು ಣಕಾರಗಳು ಕಾರಣ. ಕೆಲವರ ಉಲಿಪಿನಲ್ಲಿ ಇಲ್ಲಿಯೂ ಶಕಾರ ಇಲ್ಲವೇ ಸಕಾರ ಕಾಣಿಸಿಕೊಳ್ಳುತ್ತದೆ.

ಟಕಾರ ಮತ್ತು ಣಕಾರಗಳ ಮೊದಲಿಗೆ ಷಕಾರದ ಬದಲು ಶಕಾರ ಬೇರಾವ ಪದದಲ್ಲೂ ಕಾಣಿಸಿಕೊಳ್ಳುವುದಿಲ್ಲವಾದ

ಕಾರಣ, ಇಂತಹ ಪದಗಳಲ್ಲೂ ಕಶ್ಟ, ನಶ್ಟ, ಕ್ರುಶ್ಣ ಎಂಬುದಾಗಿ ಶಕಾರವನ್ನು ಬಳಸುವುದರಿಂದ ತೊಂದರೆಯಾಗದು.

(೫) ವಿಸರ್ಗ(ಃ)ವನ್ನು ದುಃಖ, ಅಂತಃಕರಣ, ಬಹುಶಃ ಎಂಬಂತಹ ಕೆಲವೇ ಕೆಲವು ಸಂಸ್ಕ್ರುತದ ಎರವಲು ಪದಗಳಲ್ಲಿ ಕಾಣಬಹುದು. ಈಗಾಗಲೇ ಸಕಾರ–ಶಕಾರಗಳೆದುರು ಬಂದಿರುವ ಈ ಬರಿಗೆಯನ್ನು ಸಕಾರ–ಶಕಾರಗಳೊಂದಿಗೆ ಸೇರಿಸಿ ಒತ್ತುಬರಿಗೆಯಾಗಿ ಕಾಣಿಸಲಾಗುತ್ತದೆ (ನಿಃಸಾರ–ನಿಸ್ಸಾರ, ನಿಃಸಂತಾನ–ನಿಸ್ಸಂತಾನ, ನಿಃಶೇಷ–ನಿಶ್ಶೇಶ, ನಿಃಶಬ್ದ–ನಿಶ್ಶಬ್ದ). ಉಳಿದೆಡೆಗಳಲ್ಲೂ ಇದೇ ರೀತಿಯಲ್ಲಿ ಮುಚ್ಚುಲಿಗಳೆದುರು ಒತ್ತುಬರಿಗೆಯಾಗಿ ಮತ್ತು ಪದದ ಕೊನೆಯಲ್ಲಿ ಹಕಾರವಾಗಿ ಹೆಚ್ಚಿನ ಕನ್ನಡಿಗರೂ ಉಲಿಯುವ ಹಾಗೆ (ದುಕ್ಕ, ಅಂತಕ್ಕರಣ ಮತ್ತು ಬಹುಶಹ ಎಂಬಂತೆ) ಕಾಣಿಸಬಹುದು.

(೬) ಕನ್ನಡ ಬರಹದಲ್ಲಿ ಐ ಮತ್ತು ಔಗಳೆಂಬ ಎರಡು ಬರಿಗೆಗಳು ಅನವಶ್ಯಕವಾಗಿ ಸೇರಿಕೊಂಡಿವೆ. ಉಲಿಪಿನಲ್ಲಿ ಅವು ಅಯ್ ಮತ್ತು ಅವ್ ಎಂಬವುಗಳಿಂದ ಬೇರಾಗಿಲ್ಲ. ಹಾಗಾಗಿ, ಅವನ್ನು ಬಳಸಬೇಕಾಗಿರುವ ಕಡೆಗಳಲ್ಲೆಲ್ಲ ಅಯ್ ಮತ್ತು ಅವ್ ಎಂಬವುಗಳನ್ನೇ ಬಳಸಲು ಬರುತ್ತದೆ.

ಅಯ್ ಮತ್ತು ಅವ್ ಎಂಬವುಗಳು ಅಕಾರ ಮತ್ತು ಯಕಾರ/ವಕಾರಗಳ ಜೋಡಿಗಳಾಗಿದ್ದರೂ ಸಂಸ್ಕ್ರುತದ ಪದಗಳಲ್ಲಿ ಮತ್ತು ಸೇರಿಕೆಯ ಕಟ್ಟಲೆ(ಸಂದಿ)ಗಳಲ್ಲಿ ಅವು ಬೇರೆ ತೆರೆಯುಲಿಗಳಹಾಗಿವೆಯಲ್ಲದೆ ತೆರೆಯುಲಿ–ಮುಚ್ಚುಲಿ ಜೋಡಿಗಳ ಹಾಗಿಲ್ಲ. ಹಾಗಾಗಿ, ಸಂಸ್ಕ್ರುತ ವ್ಯಾಕರಣಗಳಲ್ಲಿ ಅವನ್ನು ಬೇರೆಯೇ ಎರಡು ತೆರೆಯುಲಿಗಳೆಂದು ತಿಳಿಯಲಾಗಿದೆ.

ಇದಲ್ಲದೆ, ಸಂಸ್ಕ್ರುತದಲ್ಲಿ ಯಕಾರ-ವಕಾರಗಳು ಅಯ್ ಮತ್ತು ಅವ್ ಎಂಬ ಈ ಎರಡು ತೆರೆಯುಲಿ-ಮುಚ್ಚುಲಿ ಜೋಡಿಗಳಲ್ಲಿ ಮಾತ್ರ ಬರುತ್ತವಲ್ಲದೆ ಬೇರೆ ಜೋಡಿಗಳಲ್ಲಿ ಬರುವುದಿಲ್ಲ. ಹಾಗಾಗಿ, ಈ ಎರಡು ತೆರೆಯುಲಿ-ಮುಚ್ಚುಲಿ ಜೋಡಿಗಳನ್ನು ಬರೆಯುವುದಕ್ಕಾಗಿ ಐ ಮತ್ತು ಔ ಎಂಬ ಎರಡು ತೆರೆಯುಲಿ ಬರಿಗೆಗಳನ್ನು ಬಳಸುವುದು ಸಂಸ್ಕ್ರುತದ ಮಟ್ಟಿಗೆ ಸರಿಯಾದ ಕ್ರಮ.

ಆದರೆ, ಕನ್ನಡದಲ್ಲಿ ಯಕಾರ ಮತ್ತು ವಕಾರಗಳು ಅಕಾರದೊಂದಿಗೆ ಮಾತ್ರವಲ್ಲದೆ ಬೇರೆ ತೆರೆಯುಲಿಗಳೊಂದಿಗೂ ತೆರೆಯುಲಿ-ಮುಚ್ಚುಲಿ ಜೋಡಿಗಳಲ್ಲಿ ಬಳಕೆಯಾಗುತ್ತವೆ. ಈ ವಿಶಯದಲ್ಲಿ ವಕಾರಕ್ಕಿಂತಲೂ ಯಕಾರ ಹೆಚ್ಚು ಜೋಡಿಗಳಲ್ಲಿ ಕಾಣಿಸಿಕೊಳ್ಳುತ್ತದೆ:

| | |
|---|---|
| ಅಕಾರದೊಂದಿಗೆ | ಎಕಾರದೊಂದಿಗೆ |
| ಕಯ್ (ಕಯ್ಬೆರಳು) | ಕೆಯ್ (ಬತ್ತದ ಕೆಯ್) |
| ಬಯ್ (ಬಯ್ಯು) | ನೆಯ್ (ನೆಯ್ಗೆ) |
| | |
| ಒಕಾರದೊಂದಿಗೆ | ಉಕಾರದೊಂದಿಗೆ |
| ಕೊಯ್ (ಕೊಯ್ಯು) | ತುಯ್ (ತುಯಿತ) |
| ಹೊಯ್ (ಹೊಯ್ಯು) | ಕುಯ್ (ಕುಯಿಲಾಳು) |
| ನೊಯ್ (ನೊಂದವರು) | |

ಇದಲ್ಲದೆ, ಅಯ್ ಮತ್ತು ಅವ್ ಎಂಬವುಗಳ ಬಳಕೆಯಲ್ಲಿ ತೆರೆಯುಲಿಗಳ ಸೇರಿಕೆಯ ಕಟ್ಟಲೆಯೂ ಕನ್ನಡದಲ್ಲಿ ಕಾಣಿಸುವು

ದಿಲ್ಲ. ಅವು ಬೇರೆ ತೆರೆಯುಲಿ–ಮುಚ್ಚುಲಿ ಜೋಡಿಗಳ ಹಾಗೆಯೇ ಬಳಕೆಯಾಗುತ್ತವೆ.

ಹಾಗಾಗಿ, ಅಯ್ ಮತ್ತು ಅವ್ ಎಂಬವುಗಳಿಗೆ ಮಾತ್ರ ಐ ಮತ್ತು ಔ ಎಂಬುದಾಗಿ ಎರಡು ತೆರೆಯುಲಿ ಬರಿಗೆಗಳನ್ನು ಬಳಸುವುದಕ್ಕೆ ಕನ್ನಡದಲ್ಲಿ ಯಾವ ಆದಾರವೂ ಇಲ್ಲ. ಆ ಎರಡು ಬರಿಗೆಗಳನ್ನು ಬಿಟ್ಟುಕೊಟ್ಟಲ್ಲಿ ಕನ್ನಡ ಬರಹವನ್ನು ಕಲಿಯುವ ಕೆಲಸ ಅಶ್ಟರ ಮಟ್ಟಿಗೆ ಸುಲಬವಾಗಬಲ್ಲುದು.

ಇದಲ್ಲದೆ, ಈ ರೀತಿ ಅನವಶ್ಯಕವಾಗಿ ಅಯ್ ಎಂಬುದನ್ನು ಐ ಎಂಬುದಾಗಿ ಬರೆದಿರುವುದು ಕನ್ನಡದ ಕೆಲವು ವಿದ್ವಾಂಸರನ್ನೇ ಗೊಂದಲಕ್ಕೆ ಒಳಪಡಿಸಿದ ಹಾಗೆ ಕಾಣಿಸುತ್ತದೆ. ಎತ್ತುಗೆಗೆ, ಕನ್ನಡದ ಕಯ್ (ಕೈ) ಎಂಬುದನ್ನು ಕೆಲವೊಮ್ಮೆ ಕೆಯ್ ಎಂಬುದಾಗಿ ಬರೆಯಲಾಗುತ್ತದೆ ಮತ್ತು ಗೆಯ್ ಎಂಬುದನ್ನು ಕೆಲವೊಮ್ಮೆ ಗೈ ಎಂಬುದಾಗಿಯೂ ಬರೆಯಲಾಗುತ್ತದೆ. ಮಯ್, ಕೆಯ್ ಮೊದಲಾದ ಬೇರೆ ಪದಗಳ ಬರವಣಿಗೆಯಲ್ಲೂ ಇಂತಹದೇ ಗೊಂದಲ ಕಾಣಿಸಿಕೊಳ್ಳುತ್ತದೆ.

ಮುಚ್ಚುಲಿಗಳ ಬಳಿಕ ಬಂದಾಗ ಐ ಎಂಬುದಕ್ಕೆ ಎ ಎಂಬುದರ ಹಾಗೆಯೇ ಕಾಣಿಸುವಂತಹ ರೂಪ ಇರುವುದು (ಕೈ, ಮೈ, ಗೈ ಮೊದಲಾದವುಗಳಿಗೂ ಕೆ, ಮೆ, ಗೆ ಮೊದಲಾದವುಗಳಿಗೂ ನಡುವೆ ಹೋಲಿಕೆಯಿರುವುದು) ಈ ಗೊಂದಲಕ್ಕೆ ಕಾರಣವಿರಬೇಕು. ಐ ಮತ್ತು ಔ ಬರಿಗೆಗಳನ್ನು ಬಿಟ್ಟುಕೊಡುವುದರ ಮೂಲಕ ಈ ಗೊಂದಲವನ್ನು ಇಲ್ಲವಾಗಿಸ ಬಹುದು.

(೭) ಕನ್ನಡ ಬರಹದಲ್ಲಿ ಹೆಚ್ಚಿನ ಮುಚ್ಚುಲಿ(ವ್ಯಂಜನ) ಗಳಿಗೂ ದೊಡ್ಡ ರೂಪ ಮತ್ತು ಚಿಕ್ಕ ರೂಪ ಎಂಬುದಾಗಿ

ಎರಡೆರಡು ರೂಪಗಳು ಮಾತ್ರ ಇವೆ. ಪದಗಳ ಮೊದಲಿಗೆ (ನೀ, ರೀ), ತೆರೆಯುಲಿಗಳ ನಡುವೆ (ಅವನು, ಇಲಿ) ಮತ್ತು ತೆರೆಯುಲಿ ಮತ್ತು ಮುಚ್ಚುಲಿಗಳ ನಡುವೆ (ಅಣ್ಣ, ಅಕ್ಕ, ಉಕ್ರಿ) ಬರುವಾಗ ದೊಡ್ಡ ರೂಪ ಕಾಣಿಸಿಕೊಳ್ಳುತ್ತದೆ, ಮತ್ತು ಉಳಿದೆಡೆಗಳಲ್ಲಿ ಚಿಕ್ಕ ರೂಪ ಕಾಣಿಸಿಕೊಳ್ಳುತ್ತದೆ.

ಇದಕ್ಕೆ ಮೂಗುಲಿಗಳು ಮತ್ತು ರಕಾರ ಹೊರಪಡಿಕೆಗಳು: ಮೂಗುಲಿಗಳಿಗೆ ಒಂದು ಚಿಕ್ಕ ರೂಪ ( ್ಮ, ್ನ, ್ಣ) ಮತ್ತು ಎರಡು ದೊಡ್ಡ ರೂಪಗಳು (ಮ, ನ, ಣ ಎಂಬಂತಹ ರೂಪ ಮತ್ತು ಎಲ್ಲವಕ್ಕೂ ಒಂದೇ ಆಗಿರುವ ಂ ರೂಪ) ಇವೆ.

ರಕಾರಕ್ಕೂ ಇದೇ ರೀತಿಯಲ್ಲಿ ಒಂದು ಚಿಕ್ಕ ರೂಪ ( ್ರ) ಮತ್ತು ಎರಡು ದೊಡ್ಡ ರೂಪಗಳಿವೆ (ರ, ೯). ಆದರೆ, ಇವುಗಳ ಬಳಕೆ ಮೂಗುಲಿಗಳ ಬಳಕೆಯ ಹಾಗಿಲ್ಲ.

ಪದಗಳ ಮೊದಲಿಗೆ ಮತ್ತು ಎರಡು ತೆರೆಯುಲಿಗಳ ನಡುವೆ ರಕಾರ ಬೇರೆ ಮುಚ್ಚುಲಿಗಳ ಹಾಗೆ ರ ಎಂಬ ದೊಡ್ಡ ರೂಪದಲ್ಲೇ ಬರುತ್ತದೆ (ರಾಮ, ಅರಸು, ಬರು); ಮುಚ್ಚುಲಿಗಳ ಬಳಿಕವೂ ಬೇರೆ ಮುಚ್ಚುಲಿಗಳ ಹಾಗೆ, ಅದು ಚಿಕ್ಕ ರೂಪದಲ್ಲೇ ಬರುತ್ತದೆ (ಪ್ರತಿಮೆ, ಪತ್ರಿಕೆ). ಆದರೆ, ತೆರೆಯುಲಿ ಮತ್ತು ಮುಚ್ಚುಲಿಗಳ ನಡುವೆ ಇದು ೯ ಎಂಬ ಬೇರೊಂದು ದೊಡ್ಡ ರೂಪದಲ್ಲಿ ಬರುತ್ತದೆ (ಮಾರ್ಪಾಡು, ಆರ್ಯರು).

ಈ ಹೊರಪಡಿಕೆಗೆ ಇನ್ನೊಂದು ಹೊರಪಡಿಕೆಯೂ ಇದೆ! ರಕಾರ ಒಂದು ಮುಚ್ಚುಲಿಯೇ ಆದರೂ ತೆರೆಯುಲಿ ಮತ್ತು ರಕಾರಗಳ ನಡುವೆ ಇದು ೯ ಎಂಬ ಎರಡನೇ ದೊಡ್ಡ ರೂಪದಲ್ಲಿ ಬರುವ ಬದಲು ರ ಎಂಬ ಮೊದಲನೇ ದೊಡ್ಡ ರೂಪದಲ್ಲಿ ಬರುತ್ತದೆ (ಬರ್ರೀ, ಕರ್ರಗೆ).

ಕನ್ನಡ ಬರಹವನ್ನು ಕಲಿಯುವವರಿಗೆ ರಕಾರದ ಈ ಮೂರನೆಯ ರೂಪ (ೞ ಎಂಬುದು) ತೊಂದರೆ ಕೊಡುತ್ತದೆ. ಯಾಕೆಂದರೆ, ಉಲಿಪಿನಲ್ಲಿ ಅದು ಇನ್ನೊಂದು ಮುಚ್ಚುಲಿಯ ಮೊದಲು ಬರುವುದಾದರೂ ಬರಹದಲ್ಲಿ ಆ ಮುಚ್ಚುಲಿಯ ಬಳಿಕ ಬರುತ್ತದೆ! ಎತ್ತುಗೆಗೆ, ಮಾರ್ಪಾಡು ಪದದ ಉಲಿಪಿನಲ್ಲಿ ರಕಾರ ಪಕಾರದ ಮೊದಲು ಬರುತ್ತದೆ; ಆದರೆ, ಬರಹದಲ್ಲಿ ಅದು ಪಕಾರದ ಬಳಿಕ ಬರುತ್ತದೆ!

ಕನ್ನಡ ಬರಹವನ್ನು ಸರಿಪಡಿಸುವ ಈ ಸಂದರ್ಭದಲ್ಲಿ ಅದರಲ್ಲಿ ಕಾಣಿಸುವ ಈ ರಕಾರದ ಸಮಸ್ಯೆಯನ್ನೂ ಸುಲಬವಾಗಿ ಬಗೆಹರಿಸಬಹುದು. ಇದಕ್ಕಾಗಿ ತೆರೆಯುಲಿ ಮತ್ತು ಮುಚ್ಚುಲಿಗಳ ನಡುವೆ ಬರುವ ರಕಾರವನ್ನು ಬೇರೆ ಮುಚ್ಚುಲಿಗಳ ಹಾಗೆ ಅದರ ಮೊದಲನೆಯ ದೊಡ್ಡ ರೂಪದಲ್ಲೇ ಬರೆಯಬೇಕು. (ಎತ್ತುಗೆಗೆ, ಮಾರ್ಪಾಡು ಎಂಬುದನ್ನು ಮಾರ್‍ಪಾಡು ಎಂಬುದಾಗಿ ಬರೆಯಬೇಕು). ಈಗಲೂ ಕೆಲವರು ರಕಾರವನ್ನು ಆ ರೀತಿ ಬರೆಯುತ್ತಾರೆ. ಹೀಗೆ ಮಾಡಿದಲ್ಲಿ ಅದರ ೞ ಎಂಬ ದೊಡ್ಡರೂಪ ಬೇಕಾಗುವುದಿಲ್ಲ.

## ೨.೭ ಹಂತ ಹಂತವಾಗಿ ಬಳಕೆಗೆ ತರುವುದು

ಎರವಲು ಪದಗಳ ಬರವಣಿಗೆಯಲ್ಲಿ ನಡೆಸಬೇಕಾಗಿರುವ ಈ ಮಾರ್‍ಪಾಡುಗಳನ್ನು ಹಂತ ಹಂತವಾಗಿ ಬಳಕೆಗೆ ತರಲು ಬರುತ್ತವೆ. ಮೊದಲಿಗೆ ಊರಿನ ಹೆಸರುಗಳಲ್ಲಿ ಮತ್ತು ಮಂದಿಯ ಹೆಸರುಗಳಲ್ಲಿ ಕಾಣಿಸುವ ಈ ಬರಿಗೆಗಳನ್ನು ಬದಲಾಯಿಸದಿರಬಹುದು. ಮಾರ್‍ಪಾಡಿಗೆ ಜನರು ಒಗ್ಗಿಹೋದಮೇಲೆ ಅವುಗಳಲ್ಲೂ ಈ ಹೆಚ್ಚಿನ ಬರಿಗೆಗಳ ಬಳಕೆಯನ್ನು ಇಲ್ಲವಾಗಿಸಬಹುದು.

ಬರವಣಿಗೆಯನ್ನು ಮಾರ್ಪಡಿಸಹೊರಟಿರುವ ಕೆಲವು ನುಡಿಗಳಲ್ಲಿ ಇಂತಹ ಹೊಲಬನ್ನು ಬಳಸಿಕೊಳ್ಳಲಾಗಿದೆ. ಎತ್ತುಗೆಗೆ, ಜರ್ಮನಿಯಲ್ಲಿ ಬರವಣಿಗೆಯ ಮಾರ್ಪಾಡಿನಿಂದ ಊರುಗಳ ಮತ್ತು ಮಂದಿಯ ಹೆಸರುಗಳನ್ನು ಹೊರಗಿರಿಸಲಾಗಿದೆ.

ಇದಲ್ಲದೆ, ಬರವಣಿಗೆಯನ್ನು ಮಕ್ಕಳಿಗೆ ಕಲಿಸುವ ಸಮಯದಲ್ಲಿ ಮೊದಲಿಗೆ ಕನ್ನಡಕ್ಕೆ ಅವಶ್ಯವಾಗಿ ಬೇಕಾಗುವ ೩೧ ಬರಿಗೆಗಳನ್ನಶ್ಟೇ ಕಲಿಸಬೇಕು. ಈಗ ಬ-ಅ, ಫ಼, ಜ಼ ಎಂಬಂತಹ ಕನ್ನಡ ಬರಹಗಳಲ್ಲಿ ಬಳಕೆಯಾಗುವ ಕೆಲವು ಹೆಚ್ಚಿನ ಬರಿಗೆಗಳನ್ನು ಮಕ್ಕಳಿಗೆ ಮೊದಲಿಗೇನೇ ಹೇಗೆ ಹೇಳಿಕೊಡುವುದಿಲ್ಲವೋ ಹಾಗೆಯೇ ಮಹಾಪ್ರಾಣ, ಋ, ಷ ಮೊದಲಾದ ಈ ಹೆಚ್ಚಿನ ಬರಿಗೆಗಳನ್ನೂ ಇವತ್ತಿನ ಹಾಗೆ ಮೊದಲಿಗೇನೇ ಹೇಳಿಕೊಡಬೇಕಾಗಿಲ್ಲ.

ಹೀಗೆ ಮಾಡುವುದರಿಂದ, ಓದಿನಲ್ಲಿ ಬರುವ ಬರಿಗೆಗಳಿಗೂ ಉಲಿಗಳಿಗೂ ನಡುವಿರುವ ಸಂಬಂದವನ್ನು ಮಕ್ಕಳಿಗೆ ಸುಲಬವಾಗಿ ತಿಳಿದುಕೊಳ್ಳಲು ಬರುತ್ತದೆ, ಮತ್ತು ಅವರ ಓದಿನ ಕಲಿಕೆ ಬೇಗನೆ ಮುಂದೆ ಹೋಗುತ್ತದೆ. ಕೆಳವರ್‍ಗದ ಮಕ್ಕಳಿಗೂ ಓದಿನ ಕಲಿಕೆ ಇವತ್ತಿನ ಹಾಗೆ ಹೆಚ್ಚು ತೊಂದರೆ ಕೊಡುವುದಿಲ್ಲ.

## ೨.೮ ಸಂಸ್ಕ್ರುತ ಪದಗಳು ಮಾರ್ಪಡದೆ ಉಳಿದಿಲ್ಲ

ಸಂಸ್ಕ್ರುತದಿಂದ ಎರವಲಾಗಿ ಪಡೆದ ಪದಗಳನ್ನು ಈಗಾಗಲೇ ನಾವು ಹಲವು ಬಗೆಗಳಲ್ಲಿ ಮಾರ್ಪಡಿಸಿ ಬಳಸುತ್ತಿದ್ದೇವೆ. ಕನ್ನಡದ ಸೊಗಡಿಗೆ ಅವನ್ನು ಹೊಂದಿಸಿಕೊಳ್ಳಬೇಕೆಂಬುದೇ ಅವನ್ನು ಹೀಗೆ ಮಾರ್ಪಡಿಸಲು ಮುಕ್ಯ ಕಾರಣ. ಇಂತಹ ಪದಗಳಲ್ಲಿ ಬರುವ ಮಹಾಪ್ರಾಣ ಬರಿಗೆಗಳು, ಷಕಾರ, ಋಕಾರ ಮೊದಲಾದುವನ್ನು

ಅಲ್ಪಪ್ರಾಣ ಬರಿಗೆಗಳು, ಶಕಾರ, ರಕಾರ ಎಂಬುದಾಗಿ ಮಾರ್ಪಡಿಸುವುದೂ ಇಂತಹದೇ ಒಂದು ಪ್ರಯತ್ನವಾಗುತ್ತದೆ.

ನಾವು ಸಂಸ್ಕೃತದಿಂದ ಎರವಲಾಗಿ ಪಡೆದಿರುವ ಕ್ಲುಪ್ತ ಎಂಬಂತಹ ಕೆಲವು ಪದಗಳಲ್ಲಿ ಋಕಾರದ ಹಾಗೆಯೇ ಇರುವ ಬೇರೊಂದು ತೆರೆಯುಲಿಯಿದೆ. ಆದರೆ, ಅದನ್ನು ಬರೆಯಲು ಕನ್ನಡ ಬರವಣಿಗೆಯಲ್ಲಿ ಬರಿಗೆಯಿಲ್ಲ. ಹಾಗಾಗಿ, ಅದನ್ನು ಲು ಎಂದೇ ಬರೆಯುತ್ತೇವೆ. ಋಕಾರವನ್ನು ರು ಎಂಬುದಾಗಿ ಬರೆಯುವುದು ನಾವು ಮಾಡಬೇಕಾಗಿರುವ ಇಂತಹದೇ ಒಂದು ಮಾರ್ಪಾಡು.

ಎರವಲಾಗಿ ಪಡೆದಿರುವ ಸಂಸ್ಕೃತ ಪದಗಳಲ್ಲಿ ನಮ್ಮ ನುಡಿಗೆ ಹೊಂದಿಕೊಳ್ಳುವ ಹಾಗೆ ಇನ್ನೂ ಹಲವಾರು ಮಾರ್ಪಾಡುಗಳನ್ನು ನಾವು ಈಗಾಗಲೇ ಮಾಡಿಕೊಂಡಿದ್ದೇವೆ: ಪದಗಳ ಕೊನೆಯ ಉದ್ದ ಆ ತೆರೆಯುಲಿಯನ್ನು ಗಿಡ್ಡ ಎ ತೆರೆಯುಲಿಯಾಗಿ ಮಾರ್ಪಡಿಸಿದ್ದೇವೆ (*ಸೀತಾ-ಸೀತೆ*, *ಗುಹಾ-ಗುಹೆ*, *ಪತಾಕಾ-ಪತಾಕೆ*, *ಮಾಲಾ-ಮಾಲೆ*); ಪದಗಳ ಕೊನೆಯ ಸೊನ್ನೆಯನ್ನು ತೆಗೆದುಹಾಕಿದ್ದೇವೆ (*ಜ್ಞಾನಂ-ಜ್ಞಾನ*, *ತೃಣಂ-ತೃಣ*, *ನಿವೇಶನಂ-ನಿವೇಶನ*); ಪದಗಳ ಕೊನೆಯ ಸಕಾರವನ್ನು ಸ್ಸು ಎಂಬುದಾಗಿ ಮಾರ್ಪಡಿಸಿದ್ದೇವೆ (*ಆಯುಸ್-ಆಯುಸ್ಸು*, *ಛಂದಸ್-ಛಂದಸ್ಸು*, *ತಪಸ್-ತಪಸ್ಸು*).

ತಕಾರದಲ್ಲಿ ಕೊನೆಗೊಳ್ಳುವ *ಶ್ರೀಮತ್*, *ಭಗವತ್* ಎಂಬಂತಹ ಹಲವು ಪದಗಳನ್ನು ಒರೆಣಿಕೆಯ (ಏಕವಚನದ) ರೂಪಗಳಲ್ಲಿ ಎರವಲು ಪಡೆಯುವ ಬದಲು *ಶ್ರೀಮಂತ*, *ಭಗವಂತ* ಎಂಬಂತಹ ಹಲವೆಣಿಕೆಯ (ಬಹುವಚನದ) ರೂಪಗಳಲ್ಲಿ ಎರವಲು ಪಡೆದಿದ್ದೇವೆ, ಮತ್ತು ಅವನ್ನೇ ಒರೆಣಿಕೆಯಲ್ಲೂ ಬಳಸುತ್ತಿದ್ದೇವೆ (*ಭಗವಂತನನ್ನು*).

ಸಂಸ್ಕೃತ ಪದಗಳಲ್ಲಿ ಬಂದ ಲಕಾರವನ್ನು ಹಲವೆಡೆಗಳಲ್ಲಿ ಳಕಾರವಾಗಿ ಮಾರ್ಪಡಿಸಿಕೊಂಡಿದ್ದೇವೆ (ವಿರಲ-ವಿರಳ, ಬಹಲ-ಬಹಳ, ಪ್ರಲಯ-ಪ್ರಳಯ, ದ್ವಿದಲ-ದ್ವಿದಳ, ಕಲಂಕ-ಕಳಂಕ, ಕಲೇಬರ-ಕಳೇಬರ, ತಾಲ-ತಾಳ), ಮತ್ತು ಸಕಾರದ ಮೊದಲು ಬಂದ ವಿಸರ್ಗವನ್ನು ಒತ್ತಕ್ಕರವಾಗಿ ಮಾರ್ಪಡಿಸಿ ಕೊಂಡಿದ್ದೇವೆ (ದುಃಸಾಧ್ಯ-ದುಸ್ಸಾಧ್ಯ, ನಿಃಸಂತಾನ-ನಿಸ್ಸಂತಾನ, ನಿಃಸಾರ-ನಿಸ್ಸಾರ).

ಸಂಸ್ಕೃತದಲ್ಲಿ ಕಂಠ, ಉಪವಾಸ, ಮಾರ್ಗ, ದೇಶ, ದೀಪ ಮೊದಲಾದ ಪದಗಳು ಪುಲ್ಲಿಂಗದಲ್ಲಿವೆ; ಜಟಾ, ಜಿಹ್ವಾ, ತುಲಸೀ, ಬುದ್ಧಿ ಮೊದಲಾದವು ಸ್ತ್ರೀಲಿಂಗದಲ್ಲಿವೆ; ಕರ್ಮ, ಕಾರ್ಯ, ಚರ್ಮ, ರಹಸ್ಯ, ತೈಲ ಮೊದಲಾದವು ನಪುಂಸಕ ಲಿಂಗದಲ್ಲಿವೆ. ಆದರೆ, ಕನ್ನಡದಲ್ಲಿ ಇವೆಲ್ಲವನ್ನೂ ನಾವು ನಪುಂಸಕ ಲಿಂಗದಲ್ಲೇ ಬಳಸುತ್ತೇವೆ. ಮಾರ್ಗ ಸಿಕ್ಕಿತು, ಬುದ್ಧಿ ಬಂತು ಎನ್ನುತ್ತೇವಲ್ಲದೆ ಮಾರ್ಗ ಸಿಕ್ಕಿದ, ಬುದ್ಧಿ ಬಂದಳು ಎನ್ನುವುದಿಲ್ಲ.

ಕನ್ನಡದಲ್ಲಿ ಮುಖ್ಯವಾಗಿ ಹೆಸರುಪದ (ನಾಮಪದ), ಪರಿಚೆಪದ (ಗುಣಪದ), ಮತ್ತು ಎಸಕಪದ (ಕ್ರಿಯಾಪದ) ಎಂಬುದಾಗಿ ಮೂರು ಬಗೆಯ ಪದಗಳಿವೆ; ಆದರೆ, ಸಂಸ್ಕೃತದಲ್ಲಿ ಇವಕ್ಕೆ ಬದಲು ನಾಮಪದ ಮತ್ತು ಕ್ರಿಯಾಪದ ಎಂಬ ಎರಡು ಬಗೆಯ ಪದಗಳಷ್ಟೇ ಬಳಕೆಯಲ್ಲಿವೆ.

ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಕನ್ನಡದ ವಾಕ್ಯಗಳಲ್ಲಿ ಹೊಂದಿಸಿಕೊಳ್ಳುವುದಕ್ಕಾಗಿ ನಾವು ಕೆಲವು ನಾಮಪದಗಳನ್ನು ಹೆಸರುಪದಗಳಾಗಿ ಬಳಸುತ್ತೇವೆ, ಮತ್ತು ಬೇರೆ ಕೆಲವನ್ನು ಪರಿಚೆಪದಗಳಾಗಿ ಬಳಸುತ್ತೇವೆ.

ಎತ್ತುಗೆಗೆ, ನಿರ್ವಾಹಕ, ರಕ್ಶಕ, ಪ್ರೇಕ್ಶಕ ಮೊದಲಾದ ಕೆಲವು ನಾಮಪದಗಳನ್ನು ಹೆಸರುಪದಗಳಾಗಿ ಬಳಸುತ್ತೇವೆ, ಮತ್ತು ವ್ಯಾವಹಾರಿಕ, ಸಾಮಾಜಿಕ, ಯಾಂತ್ರಿಕ ಮೊದಲಾದ ಬೇರೆ ಕೆಲವು ನಾಮಪದಗಳನ್ನು ಪರಿಚೆಪದಗಳಾಗಿ ಬಳಸುತ್ತೇವೆ; ಈ ಎರಡನೇ ಬಗೆಯ ನಾಮಪದಗಳನ್ನು ಹೆಸರುಪದಗಳಾಗಿ ಬಳಸುವುದಿಲ್ಲ (*ಸಾಮಾಜಿಕವನ್ನು, *ಯಾಂತ್ರಿಕಕ್ಕೆ ಎಂಬಂತಹ ಬಳಕೆಗಳು ಕನ್ನಡದಲ್ಲಿಲ್ಲ).

ಲಾಕ್ಶಣಿಕ, ಮಾಸಿಕ, ಪ್ರೇರಕ ಮೊದಲಾದ ಬೇರೆ ಕೆಲವು ನಾಮಪದಗಳನ್ನು ಹೆಸರುಪದಗಳಾಗಿಯೂ ಬಳಸುತ್ತೇವೆ ಮತ್ತು ಪರಿಚೆಪದಗಳಾಗಿಯೂ ಬಳಸುತ್ತೇವೆ.

ನಿಜಕ್ಕೂ ಎರವಲಾಗಿ ಪಡೆದ ಪದಗಳಲ್ಲಿ ಈ ರೀತಿ ಅವು ನಮ್ಮ ನುಡಿಗೆ ಹೊಂದಿಕೊಳ್ಳುವ ಹಾಗೆ ಬದಲಾವಣೆಗಳನ್ನು ಮಾಡುವುದು ನಮ್ಮ ಹಕ್ಕು. ಎಲ್ಲಾ ನುಡಿಗಳಲ್ಲೂ ಅಂತಹ ಬದಲಾವಣೆಗಳು ನಡೆಯುತ್ತಲೇ ಇರುತ್ತವೆ. ಎರವಲಾಗಿ ಪಡೆದ ಪದಗಳು ಆ ರೀತಿ ಬದಲಾಗದಿರುವುದೇ ಒಂದು ವಿಚಿತ್ರವಾದ ಮತ್ತು ಅಸ್ವಾಬಾವಿಕವಾದ ಪರಿಸ್ತಿತಿಯಾಗಿದೆ.

ಮೇಲೆ ಸೂಚಿಸಿದ ಹಾಗೆ, ಕನ್ನಡದ ಬರಹಗಾರರಿಗೆ ಸಂಸ್ಕ್ರುತದ ಮೇಲಿರುವ ಕುರುಡು ಅಬಿಮಾನದಿಂದಾಗಿ ಕೆಲವು ವಿಶಯಗಳಲ್ಲಿ ನಾವು ಈ ಹಕ್ಕನ್ನು ಕಳೆದುಕೊಂಡಿದ್ದೇವೆ. ಸಂಸ್ಕ್ರುತ ಪದಗಳನ್ನು ಹೇಗೆಯೇ ಉಲಿಯಲಿ, ಬರೆಯುವಾಗ ಮಾತ್ರ ಅವನ್ನು ಸಂಸ್ಕ್ರುತದಲ್ಲಿರುವ ಹಾಗೆಯೇ ಬರೆಯಬೇಕು (ಮೇಲಿನ ಕೆಲವು ಅಪವಾದಗಳನ್ನು ಬಿಟ್ಟು); ಸಂಸ್ಕ್ರುತ ಪ್ರತ್ಯಯಗಳನ್ನು ಬಳಸುವಾಗ ಸಂಸ್ಕ್ರುತದವೇ ಆದ ಸೇರಿಕೆಯ ಕಟ್ಟಲೆಗಳನ್ನು ಬಳಸಬೇಕು ಎಂಬಂತಹ ಕಟ್ಟುಪಾಡುಗಳು ಇಂತಹ ಕುರುಡು ಅಬಿಮಾನದಿಂದ ಬೆಳೆದು ಬಂದುವಲ್ಲದೆ ಬೇರೇನಲ್ಲ.

## ೨ ಓದುವ ಹಾಗೆ ಬರೆಯುವುದು

ಕನ್ನಡ ಬರಹಗಳಲ್ಲಿ ಬಳಕೆಯಾಗುವ ಸಂಸ್ಕೃತದ ಎರವಲು ಪದಗಳನ್ನು ಓದುವಾಗಲೂ ಸಂಸ್ಕೃತದಲ್ಲಿರುವ ಹಾಗೆಯೇ ಓದಬೇಕು ಎಂಬುದಾಗಿ ಹೇಳುವವರೂ ಇದ್ದಾರೆ; ಆದರೆ, ಕನ್ನಡದ ಮಟ್ಟಿಗೆ ಇದು ಸಾದ್ಯವಾಗದ ಮಾತು. ಯಾಕೆಂದರೆ, ಈ ಎರವಲು ಪದಗಳನ್ನು ಮಕ್ಕಳಿಗೆ ಕಲಿಸುವ ಮಂದಿಗೂ ಅವನ್ನು ಆ ರೀತಿ ಓದಲು ಬರುವುದಿಲ್ಲವಲ್ಲ!

# ೩. ಬರವಣಿಗೆಯನ್ನು ಮಾರ್ಪಡಿಸಿಕೊಂಡಿರುವ ನುಡಿಗಳು

## ೩.೧ ಮುನ್ನೋಟ

ಬೇರೆ ನುಡಿಗಳಿಂದ ಪದಗಳನ್ನು ಎರವಲಾಗಿ ಪಡೆಯುವಾಗ, ಹೆಚ್ಚಿನ ನುಡಿಗಳಲ್ಲೂ ಅವನ್ನು ಆ ನುಡಿಗಳ ಸೊಗಡಿಗೆ ಹೊಂದಿಕೊಳ್ಳುವಂತೆ ಮಾರ್ಪಡಿಸಿಕೊಳ್ಳಲಾಗುತ್ತದೆ. ಆದರೆ, ಕೆಲವು ನುಡಿಗಳಲ್ಲಿ, ಬೇರೆ ಬೇರೆ ಕಾರಣಗಳಿಗಾಗಿ, ಇಂತಹ ಪದಗಳನ್ನು ಹೆಚ್ಚುಕಡಿಮೆ ಎರವಲು ಪಡೆದ ನುಡಿಗಳಲ್ಲಿ ಇರುವ ಹಾಗೆಯೇ ಉಳಿಸಿಕೊಳ್ಳಲಾಗಿದೆ.

ಆದರೆ, ಹೀಗೆ ಮಾಡುವುದರಿಂದ ಬರಹವನ್ನು ಕಲಿಯುವ ಮತ್ತು ಬಳಸುವ ಕೆಲಸ ತುಂಬಾ ತೊಡಕಿನದಾಗುತ್ತದೆ. ಈ ತೊಡಕನ್ನು ಇಲ್ಲವಾಗಿಸುವುದಕ್ಕಾಗಿ ಹಲವು ನುಡಿಗಳಲ್ಲಿ ಅಂತಹ ಪದಗಳ ಬರವಣಿಗೆಯನ್ನು ಮಾರ್ಪಡಿಸಿಕೊಳ್ಳಲಾಗಿದೆ, ಇಲ್ಲವೇ ಅವುಗಳ ಎಣಿಕೆಯನ್ನು ಹತೋಟಿಯಲ್ಲಿ ಇರಿಸಿಕೊಳ್ಳಲಾಗಿದೆ.

ಇದಲ್ಲದೆ, ತೊಡಕು ತೊಡಕಾಗಿರುವ ಎರವಲು ಪದಗಳನ್ನು ಉಳಿಸಿಕೊಂಡಿರುವ ಕೆಲವು ನುಡಿಗಳಲ್ಲೂ ಮಕ್ಕಳಿಗೆ ಬರಹವನ್ನು ಕಲಿಸುವಾಗ, ಮೊದಲಿನ ನಾಲ್ಕಯ್ದು ವರ್ಶಗಳಲ್ಲಿ ಅಂತಹ ಎರವಲು ಪದಗಳನ್ನು ಅವರ ಕಲಿಕೆಯಿಂದ ಹೊರಗೆ

ಇರಿಸಲಾಗುತ್ತದೆ, ಮತ್ತು ಮಕ್ಕಳು ಬರವಣಿಗೆಯಲ್ಲಿ ಸಾಕಷ್ಟು ಪಳಗಿದ ಮೇಲಷ್ಟೇ ಅವನ್ನು ಅವರ ಕಲಿಕೆಯಲ್ಲಿ ಸೇರಿಸಿಕೊಳ್ಳಲಾಗುತ್ತದೆ.

## ೩.೨ ಕೊರಿಯನ್ ನುಡಿಯ ಬರವಣಿಗೆ

ಕೊರಿಯನ್ ನುಡಿಯ ಬರಹದಲ್ಲಿ ಎರಡು ಬಗೆಯ ಬರಿಗೆಗಳನ್ನು ಬಳಸಲಾಗುತ್ತದೆ: ಕೊರಿಯನ್ ಪದಗಳನ್ನು ಬರೆಯುವುದಕ್ಕಾಗಿ ಹಂಗುಲ್ ಎಂಬ ಕಲಿಯಲು ತುಂಬಾ ಸುಲಬವಾಗಿರುವ ಬರಿಗೆಗಳನ್ನು ಬಳಸಲಾಗುತ್ತದೆ, ಮತ್ತು ಚಯ್ನೀಸ್‌ನಿಂದ ಎರವಲಾಗಿ ಪಡೆದ ಪದಗಳನ್ನು ಬರೆಯುವುದಕ್ಕಾಗಿ ಚಯ್ನೀಸ್ ಬರಿಗೆಗಳನ್ನೇ ಸ್ವಲ್ಪ ಮಟ್ಟಿಗೆ ಮಾರ್ಪಡಿಸಿರುವಂತಹ ಹಂಜ ಎಂಬ ಹೆಸರಿನ, ಕಲಿಯಲು ಸಾಕಶ್ಟು ಕಶ್ಟವಾಗಿರುವ, ಬರಿಗೆಗಳನ್ನು ಬಳಸಲಾಗುತ್ತದೆ.

ಹಂಗುಲ್ ಬರವಣಿಗೆಯಲ್ಲಿ ಬರಿಗೆಗಳು ನೇರವಾಗಿ ಉಲಿಗಳನ್ನು ಗುರುತಿಸುತ್ತವೆ; ಅದರಲ್ಲಿ ಒಂದು ಉಲಿಗೆ ಒಂದು ಬರಿಗೆ ಮಾತ್ರ ಇದೆ, ಮತ್ತು ಒಂದು ಬರಿಗೆಗೆ ಒಂದು ಉಲಿಪು (ಉಚ್ಚಾರಣೆ) ಮಾತ್ರ ಇದೆ. ಹಾಗಾಗಿ, ಅದನ್ನು ಬಳಸಿರುವ ಬರಹಗಳನ್ನು ಮಕ್ಕಳು ತುಂಬಾ ಬೇಗನೆ ಓದಲು ಕಲಿತು ಬಿಡುತ್ತಾರೆ.

ಪದಗಳನ್ನು ಉಲಿಗಳ ಜೋಡಣೆಯಿಂದ ಉಂಟುಮಾಡಲಾಗಿದೆ, ಮತ್ತು ಈ ಉಲಿಗಳನ್ನು ಬರಹದಲ್ಲಿರುವ ಬರಿಗೆಗಳು ಸೂಚಿಸುತ್ತವೆ ಎಂಬುದನ್ನು ಕಲಿಯುವವರು ಗಮನಿಸುವಂತೆ ಮಾಡಲು ಈ ಬರವಣಿಗೆಯಲ್ಲಿ ತುಂಬಾ ಸುಲಬ. ಹಾಗಾಗಿ, ದೊಡ್ಡವರು ಹಂಗುಲ್‌ನಲ್ಲಿ ಬರೆದ ಬರಹಗಳನ್ನು ಒಂದೇ ದಿನದಲ್ಲಿ ಓದಲು ಕಲಿಯಬಲ್ಲರು. ಮಕ್ಕಳಿಗೂ ಇದನ್ನು

ಕಲಿಯಲು ಹೆಚ್ಚು ಕಶ್ಟವಾಗುವುದಿಲ್ಲ; ಒಂದು ವರ್ಶದೊಳಗೆ ಅದರಲ್ಲಿ ಬರೆದ ಯಾವ ಬರಹವನ್ನು ಬೇಕಿದ್ದರೂ ಅವರು ಓದಲು ಕಲಿತುಬಿಡುತ್ತಾರೆ.

ಆದರೆ, ಕೊರಿಯನ್ ಬರಹಗಳಲ್ಲಿ ಬರುವ ಹಂಜ ಬರಿಗೆಗಳು ನೇರವಾಗಿ ಉಲಿಗಳಿಗೆ ಸಂಬಂದಿಸಿಲ್ಲ. ಒಂದೊಂದು ಪದಕ್ಕೂ ಇಂತಹ ಒಂದೊಂದು ಬರಿಗೆಯಿರುತ್ತದೆ. ಹಾಗಾಗಿ, ಅವನ್ನೆಲ್ಲ ಒಂದೊಂದಾಗಿ ಕಲಿತು ನೆನಪಿನಲ್ಲಿರಿಸಿಕೊಳ್ಳ ಬೇಕಾಗುತ್ತದೆ. ಇಂತಹ ಬರಿಗೆಗಳನ್ನು ಕಲಿಯಲು ಮಕ್ಕಳಿಗೆ ಹಲವು ವರ್ಶಗಳೇ ಬೇಕಾಗುತ್ತವೆ.

ಈ ಎರಡನೇ ಬಗೆಯ ಬರಿಗೆಗಳಿಂದಾಗುವ ತೊಂದರೆಯನ್ನು ಇಲ್ಲವಾಗಿಸಲು, ಬಡಗು ಕೊರಿಯಾದಲ್ಲಿ ಚಯ್ನೀಸ್ ಎರವಲುಗಳನ್ನು ಹಂಗುಲ್‌ನಲ್ಲೇ ಬರೆಯಬೇಕೆಂಬ, ಮತ್ತು ಅದಕ್ಕಾಗಿ ಹಂಜ ಬರಿಗೆಗಳನ್ನು ಬಳಸಲೇಬಾರದೆಂಬ ತೀರ್ಮಾನ ವನ್ನು ೧೯೪೯ರಲ್ಲಿ ಮಾಡಲಾಗಿತ್ತು. ಈ ತೀರ್ಮಾನದಿಂದಾಗಿ, ಆ ನಾಡಿನಲ್ಲಿ ಬರಹ ಬಾರದವರೇ ಇಲ್ಲದ ಹಾಗೆ ಮಾಡಲಾಗಿದೆ ಯೆಂದು ಹೇಳಲಾಗುತ್ತದೆ.

ಆದರೆ, ತೆಂಕು ಕೊರಿಯಾದಲ್ಲಿ ಚಯ್ನೀಸ್ ಎರವಲುಗಳನ್ನು ಬರೆಯಲು ಇವತ್ತಿಗೂ ಹಂಜ ಬರಿಗೆಗಳನ್ನೇ ಬಳಸಲಾಗುತ್ತಿದೆ; ಹಾಗಿದ್ದರೂ, ಅವುಗಳ ಎಣಿಕೆಯನ್ನು ಆದಶ್ಟು ಕಡಿಮೆ ಮಾಡಲು ಪ್ರಯತ್ನಿಸಲಾಗುತ್ತಿದೆ.

ಇದಲ್ಲದೆ, ಸಾಮಾನ್ಯವಾಗಿ ಎಲಿಮೆಂಟರಿ ಶಾಲೆಗಳಲ್ಲಿ ಹಂಗುಲ್ ಬರಿಗೆಗಳನ್ನು ಮಾತ್ರ ಬರೆಯಲು ಮತ್ತು ಓದಲು ಮಕ್ಕಳಿಗೆ ಹೇಳಿಕೊಡಲಾಗುತ್ತದೆ; ಅವನ್ನು ಸಲೀಸಾಗಿ ಓದಲು

ಕಲಿತ ಮೇಲೆ, ಮುಂದೆ ಮೇಲಿನ ತರಗತಿಗಳಲ್ಲಿ ಅವರಿಗೆ ಹಂಜ ಬರಿಗೆಗಳನ್ನು ಕಲಿಸಲಾಗುತ್ತದೆ.

ಮಕ್ಕಳ ಪುಸ್ತಕಗಳಲ್ಲಿ, ಹೆಣ್ಣುಮಕ್ಕಳ ಪತ್ರಿಕೆಗಳಲ್ಲಿ, ಮತ್ತು ಎಲ್ಲಾ ಜನರೂ ಓದಬೇಕಾಗಿರುವ ಬರಹಗಳಲ್ಲಿ ಹಂಗುಲ್ ಬರಿಗೆಗಳನ್ನು ಮಾತ್ರ ಬಳಸಲಾಗುತ್ತದೆ; ಹಲವು ದಿನಪತ್ರಿಕೆ, ವಾರಪತ್ರಿಕೆಗಳಲ್ಲೂ ತುಂಬಾ ಕಡಿಮೆ ಹಂಜ ಬರಿಗೆಗಳನ್ನು ಬಳಸಲಾಗುತ್ತದೆ.

## ೩.೩ ಪಂಜಾಬಿ ನುಡಿಯ ಬರವಣಿಗೆ

ಪಂಜಾಬಿ ನುಡಿಯನ್ನು ಬರೆಯಲು ಗುರ್ಮುಕಿ ಎಂಬ ಹೆಸರಿನ ಬರವಣಿಗೆಯನ್ನು ಬಳಸಲಾಗುತ್ತದೆ. ಇದು ಬ್ರಾಹ್ಮೀ ಬರವಣಿಗೆಯಿಂದಲೇ ಬೆಳೆದುಬಂದಿದೆಯಾದರೂ ಅದರಲ್ಲಿ ಪಂಜಾಬಿ ಪದಗಳನ್ನು ಬರೆಯಲು ಬೇಕಾಗುವ ಬರಿಗೆ(ಅಕ್ಕರ)ಗಳನ್ನಶ್ಟೇ ಉಳಿಸಿಕೊಳ್ಳಲಾಗಿದೆ. ಸಂಸ್ಕ್ರುತ ಪದಗಳನ್ನು ಸಂಸ್ಕ್ರುತದಲ್ಲಿರುವ ಹಾಗೆ ಬರೆಯಲು ಬೇಕಾಗುವ ಬರಿಗೆಗಳನ್ನು ಉಳಿಸಿಕೊಂಡಿಲ್ಲ.

ಪಂಜಾಬಿ ಪದಗಳನ್ನು ಬರೆಯಲು ಬೇಕಾಗುವ ಬೇರೆ ಕೆಲವು ಬರಿಗೆಗಳನ್ನೂ ಈ ಬರವಣಿಗೆಯಲ್ಲಿ ಹೊಸದಾಗಿ ರಚಿಸಿ ಸೇರಿಸಿಕೊಳ್ಳಲಾಗಿದೆ.

ಈ ಬರವಣಿಗೆಯನ್ನು ಹದಿನಾರನೇ ಶತಮಾನದ ಸಿಕ್ ಗುರು ಅಂಗದ್ ಎಂಬವರು ಬ್ರಾಹ್ಮೀ ಬರವಣಿಗೆಯನ್ನು ಪಂಜಾಬಿ ನುಡಿಗೆ ಅಳವಡಿಸಿಕೊಳ್ಳುವ ಮೂಲಕ ಉಂಟುಮಾಡಿದ್ದರೆಂದು ನಂಬಲಾಗಿದೆ.

ಇದರಲ್ಲಿ ಸಕಾರ ಮತ್ತು ಶಕಾರಗಳನ್ನು ಸೂಚಿಸಬಲ್ಲ ಬರಿಗೆಗಳಶ್ಟೇ ಇವೆಯಲ್ಲದೆ, ಷಕಾರವನ್ನು ಸೂಚಿಸಬಲ್ಲ ಬರಿಗೆಯಿಲ್ಲ. ಹಾಗಾಗಿ, ಸಂಸ್ಕ್ರುತ ಪದಗಳಲ್ಲಿ ಬರುವ ಷಕಾರವನ್ನು ಅದರ ಪಂಜಾಬಿ ಉಲಿಪನ್ನು (ಉಚ್ಚಾರಣೆಯನ್ನು) ಅನುಸರಿಸಿ ಪಂಜಾಬಿ ಬರಹದಲ್ಲಿ ಶ ಎಂಬುದಾಗಿಯೇ ಬರೆಯಲಾಗುತ್ತದೆ:

| ಸಂಸ್ಕ್ರುತ ಪದಗಳು | ಪಂಜಾಬಿ ಬರಹ |
|---|---|
| ವಿಷ | ವಿಶ |
| ಪ್ರದೂಷಣ | ಪ್ರದೂಶಣ |
| ದ್ರುಷ್ಟಿ | ದ್ರಿಶಟೀ |
| ಪುರುಷ | ಪುರುಶ |
| ವಿಶೇಷ | ವಿಶೇಶ |

ಋಕಾರವನ್ನು ಸೂಚಿಸಬಲ್ಲ ಬರಿಗೆಯೂ ಪಂಜಾಬಿ ಬರವಣಿಗೆಯಲ್ಲಿಲ್ಲ. ಹಾಗಾಗಿ, ಸಂಸ್ಕ್ರುತ ಪದಗಳಲ್ಲಿ ಬರುವ ಈ ಬರಿಗೆಯನ್ನು ರಿ ಎಂಬುದಾಗಿ ಬರೆಯಲಾಗುತ್ತದೆ:

| ಸಂಸ್ಕ್ರುತ ಪದಗಳು | ಪಂಜಾಬಿ ಬರಹ |
|---|---|
| ಕೃಪಾ | ಕ್ರಿಪಾ |
| ಕೃಷ್ಣ | ಕ್ರಿಶಣ |
| ದೃಷ್ಟಿ | ದ್ರಿಶಟಿ |
| ಸಂಸ್ಕೃತ | ಸಂಸಕರಿತ |
| ಋಷಿ | ರಿಶೀ |

ಇದಲ್ಲದೆ, ಪಂಜಾಬಿ ಬರವಣಿಗೆಯಲ್ಲಿ ಸಂಸ್ಕೃತದಲ್ಲಿ ಬರುವ ಹಲವು ಬಗೆಯ ಒತ್ತುಬರಿಗೆ(ಒತ್ತಕ್ಕರ)ಗಳನ್ನು ಸೂಚಿಸಲು ಬರುವುದಿಲ್ಲ. ಅವು ಒತ್ತುಮುಚ್ಚುಲಿ(ವ್ಯಂಜನ)ಗಳಾಗಿ ಪಂಜಾಬಿ ಜನರ ಉಲಿಪಿನಲ್ಲಿ ಕಾಣಿಸುವುದೂ ಇಲ್ಲ.

ಇವನ್ನೆಲ್ಲ ಉಲಿಪಿನಲ್ಲಿರುವ ಹಾಗೆ ಬಿಡಿಸಿ ಇಲ್ಲವೇ ಒತ್ತುಬರಿಗೆಗಳಲ್ಲಿರುವ ಮುಚ್ಚುಲಿಗಳಲ್ಲೊಂದನ್ನು ಬಿಟ್ಟು ಬರೆಯಲಾಗುತ್ತದೆ.

ಎತ್ತುಗೆಗೆ, ಪದಗಳ ನಡುವೆ ಬರುವ ಒತ್ತುಬರಿಗೆಗಳೆಲ್ಲ ಬೇರೆ ಬೇರೆ ಬಗೆಗಳಲ್ಲಿ ಅವುಗಳ ಉಲಿಪಿನ ಹಾಗೆ ಬರವಣಿಗೆಯಲ್ಲೂ ಬದಲಾಗುತ್ತವೆ:

| ಸಂಸ್ಕೃತ | ಪಂಜಾಬಿ | ಸಂಸ್ಕೃತ | ಪಂಜಾಬಿ |
|---|---|---|---|
| ಶಬ್ದ | ಶಬದ | ವಿದ್ಯಾ | ವಿದಿಆ |
| ಶಕ್ತಿ | ಶಕತಿ | ಅಧ್ಯಾಯ | ಅಧಿಆಯ |
| ಭಕ್ತಿ | ಭಕತಿ | ಅತ್ಯಂತ | ಅತಿಅಂತ |

ಸಂಸ್ಕೃತದ ಒತ್ತುಬರಿಗೆಗಳಲ್ಲಿ ಬರುವ ಯಕಾರ ಪಂಜಾಬಿ ಬರವಣಿಗೆಯಲ್ಲಿ ಇಕಾರವಾಗುತ್ತದೆ:

| ಸಂಸ್ಕೃತ | ಪಂಜಾಬಿ | ಸಂಸ್ಕೃತ | ಪಂಜಾಬಿ |
|---|---|---|---|
| ವ್ಯಾಸ | ವಿಆಸ | ನ್ಯಾಯ | ನಿಆಯ |
| ವ್ಯರ್ಥ | ವಿಅರಥ | ಧ್ಯಾನ | ಧಿಆನ |
| ತ್ಯಾಗ | ತಿಆಗ | | |

ಈ ರೀತಿಯಲ್ಲಿ ಸಂಸ್ಕ್ರುತ ಎರವಲು ಪದಗಳನ್ನು ಸಂಸ್ಕ್ರುತದಲ್ಲಿರುವ ಹಾಗೆ ಬರೆಯಲು ಹೋಗದೆ ಅವನ್ನು ಓದಿನಲ್ಲಿರುವ ಹಾಗೆ ಬರೆಯುವುದರಿಂದ ಪಂಜಾಬಿ ಬರವಣಿಗೆಯನ್ನು ಕಲಿಯುವ ಮತ್ತು ಬಳಸುವ ಕೆಲಸ ಹೆಚ್ಚು ಸುಲಬವಾಗಿದೆ.

## ೩.೪ ಇಂಡೊನೇಶಿಯನ್ ನುಡಿಯ ಬರವಣಿಗೆ

ಇಂಡೊನೇಶಿಯನ್ ಬರಹದಲ್ಲಿ ಸಾಕಶ್ಟು ಸಂಸ್ಕ್ರುತದ ಎರವಲು ಪದಗಳು ಬಳಕೆಯಾಗುತ್ತವೆ; ಇದಲ್ಲದೆ, ಹೊಸಪದಗಳನ್ನು ಉಂಟುಮಾಡುವಲ್ಲೂ ಸಂಸ್ಕ್ರುತದ ಪದ ಮತ್ತು ಒಟ್ಟು(ಪ್ರತ್ಯಯ)ಗಳನ್ನು ಬಳಸುವುದರಿಂದಾಗಿ, ಇಂತಹ ಸಂಸ್ಕ್ರುತದ ಎರವಲು ಪದಗಳ ಎಣಿಕೆ ಆ ನುಡಿಯಲ್ಲಿ ತುಂಬಾ ಹೆಚ್ಚಿದೆ.

ಆದರೆ, ಆ ನುಡಿಯ ಬರವಣಿಗೆಯಲ್ಲಿ ಈ ಎರವಲು ಪದಗಳನ್ನು ಓದುವ ಹಾಗೆಯೇ ಬರೆಯಲಾಗುತ್ತದೆಯಲ್ಲದೆ ಸಂಸ್ಕ್ರುತದಲ್ಲಿರುವ ಹಾಗೆ ಬರೆಯುವುದಿಲ್ಲ. ಇದರಿಂದಾಗಿ, ಸಂಸ್ಕ್ರುತ ಪದಗಳಿಗೂ ಈ ಎರವಲು ಪದಗಳಿಗೂ ನಡುವೆ ಹಲವು ಬಗೆಯ ವ್ಯತ್ಯಾಸಗಳು ಕಾಣಿಸಿಕೊಳ್ಳುತ್ತವೆ:

ಎತ್ತುಗೆಗೆ, ಸಂಸ್ಕ್ರುತದ ಮಹಾಪ್ರಾಣ ಬರಿಗೆಗಳು ಇಂಡೊನೇಶಿಯನ್ ಬರವಣಿಗೆಯಲ್ಲಿ ಅಲ್ಪಪ್ರಾಣಗಳಾಗಿ ಕಾಣಿಸಿಕೊಳ್ಳುತ್ತವೆ:

| ಸಂಸ್ಕ್ರುತ | ಇಂಡೊನೇಶಿಯನ್ | ಸಂಸ್ಕ್ರುತ | ಇಂಡೊನೇಶಿಯನ್ |
|---|---|---|---|
| ಅಧಿಕಾರ | ಅದಿಕಾರ | ಬುದ್ಧಿ | ಬುದಿ |
| ಭಕ್ತಿ | ಬಕ್ತಿ | ಮೋಘ | ಮೊಗ |
| ಧೂಪ | ದುಪ | ಮೂರ್ಖ | ಮುರ್ಕ |

೩ ಬರವಣಿಗೆಯನ್ನು ಸರಿಪಡಿಸಿಕೊಂಡಿರುವ ನುಡಿಗಳು

| | | | |
|---|---|---|---|
| ಮಧು | ಮದು | ಭೇದ | ಬೆದ |
| ದುಃಖ | ದುಕ | ಭೂಮಿ | ಬುಮಿ |

ಕೆಲವು ಪದಗಳಲ್ಲಿ ಮಹಾಪ್ರಾಣ ಹಕಾರವಾಗಿಯೂ ಕಾಣಿಸಿಕೊಳ್ಳುತ್ತದೆ (ಭಾಷಾ-ಬಹಸ, ಭಯ-ಬಹಯ).

ಸಂಸ್ಕೃತದ ಶಕಾರ ಮತ್ತು ಷಕಾರಗಳು ಇಂಡೋನೇಶಿಯನ್ ಎರವಲುಗಳಲ್ಲಿ ಸಕಾರವಾಗಿ ಬದಲಾಗಿವೆ:

| ಸಂಸ್ಕೃತ | ಇಂಡೋನೇಶಿಯನ್ | ಸಂಸ್ಕೃತ | ಇಂಡೋನೇಶಿಯನ್ |
|---|---|---|---|
| ಆಕಾಶ | ಅಕಸ | ಅಕ್ಷರ | ಅಕ್ಸರ |
| ಆಶಾ | ಅಸ | ವಿಷ | ವಿಸ |
| ಶಿಷ್ಯ | ಸಿಸ್ವ | ದೋಷ | ದೊಸ |
| ಕುಷ್ಟ | ಕುಸ್ತ | ಪುಷ್ಪ | ಪುಸ್ಪ |

ಇದಲ್ಲದೆ, ಉದ್ದ ತೆರೆಯುಲಿ(ಸ್ವರ)ಗಳು ಗಿಡ್ಡ ತೆರೆಯುಲಿಗಳಾಗಿ ಕಾಣಿಸುವುದು, ಟ/ಡ/ಣಗಳು ತ/ದ/ನಗಳಾಗಿ ಕಾಣಿಸುವುದು ಎಂಬಂತಹ ಬೇರೆಯೂ ಕೆಲವು ಮಾರ್ಪಾಡುಗಳು ಈ ಎರವಲು ಪದಗಳಲ್ಲಿ ನಡೆದಿವೆ. ಈ ಎಲ್ಲಾ ಮಾರ್ಪಾಡುಗಳೂ ಇಂಡೋನೇಶಿಯನ್ ಎರವಲು ಪದಗಳನ್ನು ಓದುವ ಹಾಗೆಯೇ ಬರೆಯುವಲ್ಲಿ ನೆರವಾಗಿವೆ.

## ೩.೫ ಜರ್ಮನ್ ನುಡಿಯ ಬರವಣಿಗೆ

ಜರ್ಮನ್ ಬರವಣಿಗೆಯಲ್ಲಿ ಓದುವುದಕ್ಕೂ ಬರೆಯುವುದಕ್ಕೂ ನಡುವೆ ಹಲವು ವ್ಯತ್ಯಾಸಗಳಿದ್ದುದರಿಂದ, ಅದನ್ನು ಕಲಿಯುವ

ಕೆಲಸ ಬರಹವನ್ನು ಹೆಚ್ಚು ಬಳಸದಿರುವ ಕುಟುಂಬಗಳಿಂದ ಬರುವ ಮಕ್ಕಳಿಗೆ ಬೇರೆ ಮಕ್ಕಳಿಗಿಂತ ಹೆಚ್ಚು ಕಶ್ಟವಾಗುತ್ತಿತ್ತು, ಮತ್ತು ಇದರಿಂದಾಗಿ, ಸಮಾಜದಲ್ಲಿ ಮುಂದೆ ಬರಲು ಇಂತಹ ಮಕ್ಕಳಿಗೆ ಉಳಿದ ಮಕ್ಕಳಿಗಿಂತ ಹೆಚ್ಚು ಕಶ್ಟವಾಗುತ್ತಿತ್ತು.

ಇದನ್ನು ಮನಗಂಡ ಅರಿವಿಗರು ಜರ್‍ಮನ್ ಬರವಣಿಗೆಯಲ್ಲಿ ಕೆಲವು ಮಾರ್‍ಪಾಡುಗಳನ್ನು ಮಾಡಿ ಅದನ್ನು ಕಲಿಯುವ ಕೆಲಸ ಎಲ್ಲಾ ಹಿನ್ನೆಲೆಯ ಮಕ್ಕಳಿಗೂ ಒಂದೇ ಬಗೆಯದಾಗುವಂತೆ ಮಾಡಬೇಕೆಂಬುದಾಗಿ ಒಂದು ಬೇಡಿಕೆಯನ್ನು ಆಳ್ವಿಕೆಯ ಮುಂದಿರಿಸಿದರು.

ಇದರಂತೆ, ಸುಮಾರು ೬,೦೦೦ ಪದಗಳಲ್ಲಿ ಓದುವುದಕ್ಕೂ ಬರೆಯುವುದಕ್ಕೂ ನಡುವಿದ್ದ ವ್ಯತ್ಯಾಸಗಳಲ್ಲಿ ಹೆಚ್ಚಿನವನ್ನೂ ಇಲ್ಲವಾಗಿಸುವಂತೆ ಅವುಗಳ ಬರವಣಿಗೆಯಲ್ಲಿ ಮಾರ್‍ಪಾಡುಗಳನ್ನು ಮಾಡಬೇಕಾಗಿತ್ತು. ಎರವಲು ಪದಗಳನ್ನೂ ಜರ್‍ಮನ್ ಬರವಣಿಗೆಗೆ ಹೊಂದಿಕೆಯಾಗುವಂತೆ ಮಾರ್‍ಪಡಿಸಬೇಕಾಗಿತ್ತು.

ಜರ್‍ಮನ್ ನುಡಿಯನ್ನು ಬಳಸುವ ಜರ್‍ಮನಿ, ಆಸ್ಟ್ರಿಯಾ, ಸ್ವಿಟ್ಸರ್‍ಲೇಂಡ್ ಮತ್ತು ಲಿಶ್ಟೆನ್‌ಸ್ಟಯ್ನ್ ದೇಶಗಳ ಆಳ್ವಿಕೆಗಳು ಒಟ್ಟು ಸೇರಿ ಈ ಬೇಡಿಕೆಯನ್ನು ಪರಿಶೀಲಿಸಿದುವು, ಮತ್ತು ೧೯೯೬ರಲ್ಲಿ ಜರ್‍ಮನ್ ಬರವಣಿಗೆಯ ತೊಡಕುಗಳನ್ನು ಹೋಗಲಾಡಿಸುವಂತಹ ಈ ಸರಿಪಡಿಕೆಗಳಿಗೆ ಅವು ತಮ್ಮ ಒಪ್ಪಿಗೆಯನ್ನು ನೀಡಿದುವು.

ಆದರೆ, ಊರುಗಳ ಮತ್ತು ಜನರ ಹೆಸರುಗಳನ್ನು ಈ ಮಾರ್‍ಪಾಡಿನ ಹೊರಗೆ ಇರಿಸುವುದೆಂದು ತೀರ್‍ಮಾನಿಸಲಾಯಿತು.

ಈ ಮಾರ್‍ಪಾಡುಗಳನ್ನು ಬಳಕೆಗೆ ತರುವ ಕೆಲಸ ಮಾತ್ರ ತುಂಬಾ ತೊಡಕಿನದಾಗಿ ಕಂಡುಬಂತು. ಯಾಕೆಂದರೆ, ಸುಮಾರು

ನೂರರಲ್ಲಿ ೭೮ರಶ್ಟು ಮಂದಿಗೆ ಈ ಸರಿಪಡಿಕೆ ಬೇಡವಾಗಿತ್ತು! ಹೀಗಿದ್ದರೂ, ಶಾಲೆಗಳಲ್ಲಿ ಮತ್ತು ಆಳ್ವಿಕೆಗೆ ಸಂಬಂದಿಸಿದ ಬರವಣಿಗೆಗಳಲ್ಲಿ ಇದನ್ನು ಕಡ್ಡಾಯಗೊಳಿಸಲಾಯಿತು.

ಈ ಮಾರ್‍ಪಾಡಿಗೆ ಕೋರ್‍ಟು ಒಪ್ಪಿಗೆ ನೀಡಿತಾದರೂ, ಬೇರೆ ಬಗೆಯ ಬರಹಗಳಲ್ಲಿ ಇದನ್ನು ಬಳಸುವುದು ಇಲ್ಲವೇ ಬಳಸದಿರುವುದು ಜನರ ಆಯ್ಕೆಗೆ ಬಿಟ್ಟದ್ದೆಂದು ಅದು ಹೇಳಿತು. ಇದರಿಂದಾಗಿ, ಮೊದಲಿಗೆ ಇದನ್ನು ಒಪ್ಪಿಕೊಂಡ ಕೆಲವು ಪ್ರಕಾಶಕರೂ ಆಮೇಲೆ ಹಳೆಯ ಬರವಣಿಗೆಯನ್ನೇ ಬಳಸಲು ತೊಡಗಿದರು.

ಆಮೇಲೆ ೨೦೦೬ರಲ್ಲಿ, ತುಂಬಾ ಎದುರಿಕೆಗೊಳಗಾಗಿದ್ದ ಕೆಲವು ಮಾರ್‍ಪಾಡುಗಳನ್ನು ಆಳ್ವಿಕೆಗಳು ಬಿಟ್ಟುಕೊಟ್ಟುದರಿಂದಾಗಿ, ಜರ್‍ಮನ್ ನುಡಿಯ ಈ ಸರಿಪಡಿಕೆಗೆ ಹೆಚ್ಚಿನವರ ಒಪ್ಪಿಗೆ ದೊರೆತಿತ್ತು, ಮತ್ತು ಇವತ್ತು ಬೇರೆ ಬಗೆಯ ಬರವಣಿಗೆಗಳಲ್ಲೂ ಅದು ಬಳಕೆಗೆ ಬರತೊಡಗಿದೆ.

## ೩.೬ ಟರ್‍ಕಿಶ್ ನುಡಿಯ ಬರವಣಿಗೆ

ಸುಮಾರು ಎಪ್ಪತ್ತೈದು ವರುಶಗಳಶ್ಟು ಹಿಂದೆ, ಟರ್‍ಕಿ ದೇಶದಲ್ಲಿ ಅದುವರೆಗೆ ಹೆಚ್ಚಿನವರೂ ಬಳಸುತ್ತಿದ್ದ ಅರೇಬಿಕ್ ಬರಿಗೆಗಳನ್ನು ಬಿಟ್ಟುಕೊಟ್ಟು, ಅದರ ಬದಲಿಗೆ ರೋಮನ್ ಬರಿಗೆಗಳನ್ನು ಬಳಸುವ ತೀರ್‍ಮಾನವನ್ನು ಮಾಡಲಾಯಿತು. ಇದರಿಂದಾಗಿ, ಮೇಲ್ವರ್‍ಗದ ಕೆಲವೇ ಕೆಲವು ಜನರ ಸೊತ್ತಾಗಿ ಉಳಿದಿದ್ದ ಟರ್‍ಕಿಶ್ ಬರಹ ಎಲ್ಲರ ಸೊತ್ತಾಗುವಂತಾಯಿತು.

ಟರ್‍ಕಿಶ್ ನುಡಿಯನ್ನಾಡುವ ಜನರು ಮುಸ್ಲಿಮರಾಗಿ ಮತಾಂತರಗೊಂಡಾಗಲೇನೇ ಅರೇಬಿಕ್ ಬರಿಗೆಗಳನ್ನು ತಮ್ಮ ನುಡಿಯ

ಬರವಣಿಗೆಗೆ ಅಳವಡಿಸಿಕೊಂಡಿರಬೇಕು. ಹಾಗಾಗಿ, ಆ ಬರಿಗೆಗಳ ಬಳಕೆಗೆ ಟರ‍್ಕಿಯಲ್ಲಿ ಸಾವಿರ ವರ‍್ಶಗಳಿಗಿಂತಲೂ ಹೆಚ್ಚಿನ ಹಿನ್ನಡವಳಿ(ಚರಿತ್ರೆ)ಯಿದೆ. ಆದರೆ, ಆ ಬರಿಗೆಗಳನ್ನು ಬಳಸಿ ಟರ‍್ಕಿಶ್ ಪದಗಳ ಉಲಿಪನ್ನು ಸರಿಯಾಗಿ ತಿಳಿಸಲು ಬರುತ್ತಿರಲಿಲ್ಲ.

ಎತ್ತುಗೆಗೆ, ಟರ‍್ಕಿಶ್ ನುಡಿಯಲ್ಲಿ ಎಂಟು ತೆರೆಯುಲಿ(ಸ್ವರ) ಗಳಿವೆ; ಆದರೆ, ಅದು ಬಳಸುತ್ತಿದ್ದ ಅರೇಬಿಕ್ ಮೂಲದ ಬರವಣಿಗೆಯಲ್ಲಿ ಮೂರು ತೆರೆಯುಲಿಗಳನ್ನಶ್ಟೇ ತೋರಿಸಲು ಬರುತ್ತಿತ್ತು. ಟರ‍್ಕಿಶ್ ನುಡಿಯಲ್ಲಿ ಇಪ್ಪತ್ತೊಂದು ಮುಚ್ಚುಲಿ (ವ್ಯಂಜನ)ಗಳಶ್ಟೇ ಇವೆ; ಆದರೆ, ಅರೇಬಿಕ್ ಮೂಲದ ಬರವಣಿಗೆಯಲ್ಲಿ ಇದಕ್ಕಿಂತಲೂ ತುಂಬಾ ಹೆಚ್ಚು ಮುಚ್ಚುಲಿಗಳನ್ನು ಬಳಸಲಾಗುತ್ತಿತ್ತು.

ಇದಕ್ಕೆ ಕಾರಣವೇನೆಂದರೆ, ಅರೇಬಿಕ್ ಮತ್ತು ಪರ‍್ಶಿಯನ್ ನುಡಿಗಳಿಂದ ಎರವಲು ಪಡೆದ ಪದಗಳನ್ನು ಬರೆಯುವಾಗ, ಉಲಿಪಿನಲ್ಲಿ ಇಲ್ಲದಂತಹ ಹಲವು ವ್ಯತ್ಯಾಸಗಳನ್ನು ಬರವಣಿಗೆ ಯಲ್ಲಿ ತೋರಿಸುವ ಹೊಲಬು ಟರ‍್ಕಿಶ್ ಬರವಣಿಗೆಯಲ್ಲಿ ಬಳಕೆಯಲ್ಲಿತ್ತು. ಬರಹಗಳಲ್ಲಿ ಇಂತಹ ಪದಗಳ ಬಳಕೆಯೂ ತುಂಬಾ ಹೆಚ್ಚಿತ್ತು. ಇದರಿಂದಾಗಿ, ಟರ‍್ಕಿಶ್ ಬರಹಕ್ಕೂ ಟರ‍್ಕಿಶ್ ಮಾತಿಗೂ ನಡುವೆ ಹಲವಾರು ವ್ಯತ್ಯಾಸಗಳು ಕಾಣಿಸುತ್ತಿದ್ದುವು.

ಈ ಎಲ್ಲಾ ಕಾರಣಗಳಿಂದಾಗಿ, ಟರ‍್ಕಿಶ್ ಬರಹ ಕೆಲವರ ಸೊತ್ತಾಗಿಯಶ್ಟೇ ಉಳಿದಿತ್ತು. ಶೇಕಡಾ ಹತ್ತಕ್ಕಿಂತ ಕಡಿಮೆ ಜನ ಅದರಲ್ಲಿ ಓದಲು-ಬರೆಯಲು ತಿಳಿದವರಾಗಿದ್ದರು. ಈ ಪರಿಸ್ತಿತಿ ಹಿಂದಿನ ಕಾಲಕ್ಕೆ ಸರಿಹೋಗಬಹುದಿತ್ತಾದರೂ, ಇಪ್ಪತ್ತನೇ ಶತಮಾನಕ್ಕೆ ಕಾಲಿರಿಸುತ್ತಿದ್ದಂತೆ, ಯುರೋಪಿನ ಬೇರೆ ನಾಡು ಗಳಲ್ಲಿ ಕಾಣಿಸುವ ಹಾಗೆ, ಟರ‍್ಕಿಯಲ್ಲೂ ಬರಹ ಎಲ್ಲರ

ಸೊತ್ತಾಗಬೇಕೆಂಬ ಕಳಕಳಿ ಅಲ್ಲಿನ ತಿಳಿವಿಗರಲ್ಲಿ ಮತ್ತು ಆಳ್ವಿಕೆಯವರಲ್ಲಿ ಉಂಟಾಯಿತು.

೧೯೨೩ರಲ್ಲಿ ಟರ್ಕಿ ಮಂದಿಯಾಳ್ವಿಕೆಗೆ (ಪ್ರಜಾಪ್ರಬುತ್ವಕ್ಕೆ) ಒಳಗಾಯಿತು, ಮತ್ತು ಆ ಸಮಯದಲ್ಲಿ ಈ ಕಳಕಳಿಗೆ ಇನ್ನಶ್ಟು ಹೆಚ್ಚಿನ ಮಹತ್ವ ಬಂತು. ಮಂದಿಯಾಳ್ವಿಕೆಯಲ್ಲಿ ಬರಹ ಎಲ್ಲರ ಸೊತ್ತಾಗುವುದು ಅತ್ಯವಶ್ಯ. ಹೆಚ್ಚಿನ ತಿಳಿವಿಗರೂ ಈ ರೀತಿ ಟರ್ಕಿಶ್ ಬರಹ ಎಲ್ಲರ ಸೊತ್ತಾಗದಿರುವುದಕ್ಕೆ ಅದು ಬಳಸುವ ಅರೇಬಿಕ್ ಮೂಲದ ಬರವಣಿಗೆಯೇ ಕಾರಣ ಎಂಬುದನ್ನು ಕಂಡುಕೊಂಡಿದ್ದರು.

ಹತ್ತೊಂಬತ್ತನೆಯ ಶತಮಾನದ ನಡುಬಾಗದಿಂದಲೂ ಅರೇಬಿಕ್ ಬರಿಗೆಗಳನ್ನು ಬಳಸಿ ಟರ್ಕಿಶ್ ನುಡಿಯನ್ನು ಬರೆಯುವ ಕುರಿತು ತಿಳಿವಿಗರಲ್ಲಿ ಅಸಮಾದಾನ ಕಾಣಿಸಲು ಸುರುವಾಗಿತ್ತು. ಆ ಸಮಯದಲ್ಲಿ ಹೆಚ್ಚಿನವರೂ ಅರೇಬಿಕ್ ಬರಿಗೆಗಳನ್ನು ಬಳಸುತ್ತಿದ್ದರಾದರೂ, ಕ್ರಿಶ್ಚಿಯನ್ನರು ರೋಮನ್ ಬರಿಗೆಗಳನ್ನು ಮತ್ತು ಬೇರೆ ಕೆಲವರು ಗ್ರೀಕ್ ಬರಿಗೆಗಳನ್ನು ಬಳಸುತ್ತಿದ್ದರು.

ಪಕ್ಕದ ನಾಡಾದ ಅಲ್ಬೇನಿಯಾದಲ್ಲಿ ೧೮೭೯ರಲ್ಲೇನೇ ಅಲ್ಬೇನಿಯನ್ ನುಡಿಗೆ ಅರೇಬಿಕ್ ಬರಿಗೆಗಳಿಗಿಂತಲೂ ರೋಮನ್ ಬರಿಗೆಗಳೇ ಒಳ್ಳೆಯವೆಂಬುದಾಗಿ ತೀರ‍್ಮಾನಿಸಿ, ಅದುವರೆಗೆ ಬಳಕೆಯಲ್ಲಿದ್ದ ಅರೇಬಿಕ್ ಬರಿಗೆಗಳಿಗೆ ಬದಲಾಗಿ ರೋಮನ್ ಬರಿಗೆಗಳನ್ನು ಬಳಸಲು ತೊಡಗಿಯಾಗಿತ್ತು. ಸುದಾರಣೆಯ ಹೆಸರಿನಲ್ಲಿ ಹೀಗೆ ಮಾಡುವುದು ದರ‍್ಮನಿಂದನೆಯೆಂಬುದಾಗಿ ಮತಾದಿಕಾರಿಗಳು ಫತ್ವಾ ಹೊರಡಿಸಿದ್ದರಾದರೂ ಈ ಕೆಲಸ ನಡೆದುಹೋಗಿತ್ತು.

೧೯೨೮ರಲ್ಲಿ ಟರ್ಕಿಯೂ ಅರೇಬಿಕ್ ಬರಿಗೆಗಳ ಬದಲು ರೋಮನ್ ಬರಿಗೆಗಳನ್ನು ಬಳಸಬೇಕೆಂಬ ತೀರ್ಮಾನಕ್ಕೆ ಬಂತು. ಆಗಿನ ಜನಪ್ರಿಯ ಅದ್ಯಕ್ಶರಾಗಿದ್ದ ಮುಸ್ತಾಫಾ ಕಮಲ್ ಅವರು ಈ ವಿಶಯದಲ್ಲಿ ಹೆಚ್ಚಿನ ಆಸಕ್ತಿ ವಹಿಸಿದುದರಿಂದಾಗಿ, ಈ ಬದಲಾವಣೆ ಇಡೀ ನಾಡಿನಲ್ಲಿ ಕೆಲವೇ ಕೆಲವು ತಿಂಗಳುಗಳಲ್ಲಿ ನಡೆದು ಹೋಗಲು ಸಾದ್ಯವಾಯಿತು.

ಈ ರೀತಿ ರೋಮನ್ ಬರಿಗೆಗಳನ್ನು ಟರ್ಕಿಶ್‌ಗೆ ಅಳವಡಿಸುವಾಗ, ಅದರ ಹಳೆ (ಅರೇಬಿಕ್ ಮೂಲದ) ಬರವಣಿಗೆಯಲ್ಲಿದ್ದ ಹಲವು ಬರಿಗೆಗಳನ್ನು ಬಿಟ್ಟುಕೊಡಲಾಯಿತು; ಎತ್ತುಗೆಗಾಗಿ, ಆ ಬರವಣಿಗೆಯಲ್ಲಿ ನಾಲ್ಕು ಬಗೆಯ ಸಕಾರಗಳಿದ್ದುವು, ಮತ್ತು ಮೂರು ಬಗೆಯ ಹಕಾರಗಳಿದ್ದುವು; ಅರೇಬಿಕ್ ಮೂಲದ ಪದಗಳನ್ನು ಅರೇಬಿಕ್‌ನಲ್ಲಿದ್ದ ಹಾಗೆಯೇ ಬರೆಯಲು ಇವು ಬೇಕಾಗಿದ್ದುವು.

ಆದರೆ, ಟರ್ಕಿಶ್ ಪದಗಳನ್ನು ಬರೆಯಲು ಅವು ಬೇಕಾಗಿರಲಿಲ್ಲ. ಹಾಗಾಗಿ, ಹೊಸ ಟರ್ಕಿಶ್ ಬರವಣಿಗೆಯಲ್ಲಿ ಎರಡು ಸಕಾರಗಳನ್ನು ಮತ್ತು ಒಂದು ಹಕಾರವನ್ನಶ್ಟೇ ಉಳಿಸಿಕೊಳ್ಳಲಾಯಿತು. ಚಕಾರ, ತಕಾರ, ಕಕಾರ ಮೊದಲಾದ ಬೇರೆ ಕೆಲವು ಬರಿಗೆಗಳಿಗೆ ಸಂಬಂದಿಸಿದಂತಹ ಕೆಲವು ವ್ಯತ್ಯಾಸಗಳನ್ನೂ ಹೊಸ ಬರವಣಿಗೆಯಲ್ಲಿ ಬಿಟ್ಟುಕೊಡಲಾಯಿತು.

ಇದರಿಂದಾಗಿ, ಹೊಸ ಬರವಣಿಗೆಯಲ್ಲಿ ಸ್ಪೆಲ್ಲಿಂಗ್ ಸಮಸ್ಯೆ ಪೂರ‍್ತಿ ಇಲ್ಲವಾಯಿತು. ಪದಗಳನ್ನು ಓದುವ ಹಾಗೆಯೇ ಬರೆಯುವ ಕಾರಣ, ಅದನ್ನು ಕಲಿಯುವ ಮತ್ತು ಬಳಸುವ ಕೆಲಸವೂ ಸುಲಬವಾಯಿತು.

ಟರ್ಕಿಶ್ ಬರವಣಿಗೆಯಲ್ಲಿ ನಡೆಸಿದ ಈ ಎರಡು ಮಾರ್ಪಾಡುಗಳಿಂದಾಗಿ, ಆ ದೇಶದಲ್ಲಿ ಬರಹ ಬಲ್ಲವರ ಎಣಿಕೆ ತುಂಬಾ ಹೆಚ್ಚಾಯಿತು, ಮತ್ತು ಬರಹ ಈ ರೀತಿ ಎಲ್ಲರ ಸೊತ್ತಾದುದರಿಂದಾಗಿ, ಅದರಲ್ಲಿ ಜೀವಂತಿಕೆಯನ್ನೂ ತುಂಬಲು ಸಾದ್ಯವಾಯಿತೆಂದು ಹೇಳಲಾಗುತ್ತಿದೆ.

## ೩.೭ ಅಸಮೀಸ್ ನುಡಿಯ ಬರವಣಿಗೆ

ಸಾಕಶ್ಟು ಚನ್ನಾಗಿದ್ದ ಒಂದು ನುಡಿಯ ಬರವಣಿಗೆಯನ್ನು ಕೆಲವು ಪಂಡಿತರು ಸೇರಿಕೊಂಡು, ನುಡಿಯ ಕುರಿತಾಗಿ ತಮ್ಮಲ್ಲಿದ್ದ ಅಜ್ನಾನದಿಂದಾಗಿ, ತುಂಬಾ ಸಿಕ್ಕಲು ಸಿಕ್ಕಲಾದ ಬರವಣಿಗೆಯಾಗಿ ಮಾರ್ಪಡಿಸಿರುವುದಕ್ಕೆ ಅಸಮೀಸ್ (ಒಸೊಮಿಯ) ನುಡಿಯ ಬರವಣಿಗೆ ಒಂದು ಒಳ್ಳೆಯ ಎತ್ತುಗೆಯಾಗಬಲ್ಲುದು.

ಅಸಮೀಸ್ ಬರವಣಿಗೆಯನ್ನು ಕ್ರಿಶ್ಚಿಯನ್ ಮಿಶನರಿಗಳು ಆ ನುಡಿಯ ಉಲಿಪಿಗೆ ಹೊಂದಿಕೆಯಾಗುವ ಹಾಗೆ ಬಳಸಿಕೊಂಡು, ಅದರಲ್ಲಿ ಹಲವು ಪುಸ್ತಕಗಳನ್ನು ಅಚ್ಚುಹಾಕಿಸಿದ್ದರು. ಶಾಲೆಗಳಲ್ಲಿ ಅದನ್ನು ಕಲಿಸುವುದಕ್ಕಾಗಿ ಒಳ್ಳೆಯ ಕಲಿಕೆಪುಸ್ತಕಗಳನ್ನೂ ಅವರು ತಯಾರಿಸಿದ್ದರು. ಇದರಲ್ಲಿ ಪದಗಳನ್ನು ಓದುವ ಹಾಗೆಯೇ ಬರೆಯಲಾಗುತ್ತಿತ್ತು.

ಆದರೆ, ಬಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ, ಕೆಲವರು ಅಸಮೀಸ್ ಪಂಡಿತರು ಒಟ್ಟು ಸೇರಿ, ಮಿಶನರಿಗಳು ಬಳಸುತ್ತಿರುವ ಬರವಣಿಗೆಯಲ್ಲಿ ಅಸಮೀಸ್ ಪದಗಳಿಗಿರುವ ಸಂಸ್ಕ್ರುತದ ಮೂಲರೂಪವನ್ನು ಸರಿಯಾಗಿ ಸೂಚಿಸಲಾಗುವುದಿಲ್ಲ ಎಂಬ ಆಕ್ಶೇಪಣೆಯನ್ನು ಮುಂದಿಟ್ಟರು.

ಆಮೇಲೆ, ಆ ರೀತಿ ಪದಗಳ ಹಿನ್ನಡವಳಿಯನ್ನು ಸೂಚಿಸು ವಂತಹ ಸ್ವರೂಪವನ್ನು ಅವಕ್ಕೆ ಕೊಟ್ಟು, ಅದನ್ನು ಕಲಿಯುವ ಮತ್ತು ಬಳಸುವ ಕೆಲಸ ತುಂಬಾ ತೊಡಕಿನದಾಗುವ ಹಾಗೆ ಮಾಡಿದರು.

ಇದರಿಂದಾಗಿ, ಇವತ್ತಿನ ಅಸಮೀಸ್ ಬರವಣಿಗೆಯಲ್ಲಿ ಉಲಿಪಿಗೂ ಬರಹಕ್ಕೂ ನಡುವೆ ದೊಡ್ಡದೊಂದು ಕಂದಕವೇ ಏರ್ಪಟ್ಟಿದೆ. ಎತ್ತುಗೆಗೆ, ಅಸಮೀಸ್ ಪದಗಳನ್ನು ಉಲಿಯುವಂತೆ ಬರೆಯಲು ಒಟ್ಟು ೩೧ ಬರಿಗೆಗಳು ಬೇಕಾಗುತ್ತವೆ.

ಆದರೆ, ಇವತ್ತು ಬಳಕೆಯಲ್ಲಿರುವ ಅಸಮೀಸ್ ಬರವಣಿಗೆ ಯಲ್ಲಿ ಒಟ್ಟು ೫೧ ಬರಿಗೆಗಳಿವೆ! ಅಸಮೀಸ್ ಪದಗಳಲ್ಲಿ ಬರುವ ಬರಿಗೆಗಳು ಪದಗಳ ಹಿನ್ನಡವಳಿಯನ್ನು ತಿಳಿಸುವ ಹಾಗೆ ಮಾಡಿದುದೇ ಅದರಲ್ಲಿ ಇಷ್ಟು ಹೆಚ್ಚು ಬರಿಗೆಗಳು ಸೇರಿ ಕೊಂಡಿರುವುದಕ್ಕೆ ಮುಕ್ಯ ಕಾರಣ.

ಅಸಮೀಸ್ ನುಡಿ ಮರಾಟಿ, ಪಂಜಾಬಿ ಮೊದಲಾದವುಗಳ ಹಾಗೆ ಸಂಸ್ಕ್ರುತದಿಂದ (ಇಲ್ಲವೇ ಅದಕ್ಕೆ ಹತ್ತಿರದ ಮೂಲ ನುಡಿಯೊಂದರಿಂದ) ಬೆಳೆದು ಬಂದಿದೆ. ಸಂಸ್ಕ್ರುತ ಮೊದಲಿಗೆ ಮಗದಿ ಪ್ರಾಕ್ರುತವಾಗಿ ಮತ್ತು ಆಮೇಲೆ ಕಾಮರೂಪ ಅಪಬ್ರಂಶವಾಗಿ ಬದಲಾಯಿತು; ಕೊನೆಗೆ ಇವತ್ತಿನ ಅಸಮೀಸ್ ನುಡಿಯಾಯಿತು. ಈ ನಡುವೆ ಸಂಸ್ಕ್ರುತದ ಪದಗಳೂ ಹಲವು ಬಗೆಯ ಮಾರ್ಪಾಡುಗಳಿಗೊಳಗಾಗಿವೆ.

ಎತ್ತುಗೆಗೆ, ಸಂಸ್ಕ್ರುತದಲ್ಲಿದ್ದ ತಥದಧನ ಮತ್ತು ಟಠಡಢಣ ಎಂಬ ಮುಚ್ಚುಲಿಗಳ ನಡುವಿನ ವ್ಯತ್ಯಾಸ ಅಸಮೀಸ್‌ನಲ್ಲಿ ಇಲ್ಲವಾಗಿದೆ. ಆ ಹತ್ತು ಮುಚ್ಚುಲಿಗಳು ಇವತ್ತು ಅಯ್ದು ಮುಚ್ಚುಲಿಗಳಾಗಿ (ತಥದಧನಗಳಾಗಿ) ಅಸಮೀಸ್ ಜನರ

ಮಾತಿನಲ್ಲಿ (ಮತ್ತು ಓದಿನಲ್ಲಿ) ಕಾಣಿಸಿಕೊಳ್ಳುತ್ತವೆ. ಆದರೆ, ಇವತ್ತಿನ ಅಸಮೀಸ್ ಬರಹದಲ್ಲಿ ತಥದಧನಗಳನ್ನು ಟಠಡಢಣಗಳಿಂದ ಬೇರಾಗಿ ಸೂಚಿಸಲಾಗುತ್ತಿದೆ.

| ಅಸಮೀಸ್ ಬರಹ | ಅಸಮೀಸ್ ಉಲಿಪು |
|---|---|
| ತಟ(ದಡ) | ತೊತ |
| ಠಂಡಾ (ಚಳಿ) | ಥಂದ್ |
| ಥಾಲ (ಬಟ್ಟಲು) | ಥಾಲ್ |
| ಡೇಕಾ(ತರುಣ) | ದೇಕ |
| ಢೋಲ(ಡೋಲು) | ಧೋಲ್ |
| ಧಾನ (ಬತ್ತ) | ಧಾನ್ |
| ರಣ (ಯುದ್ಧ) | ರೊನ್ |
| ಘನ (ದಪ್ಪ) | ಘೊನ್ |

ಸಂಸ್ಕೃತದಲ್ಲಿದ್ದ ಸ, ಶ ಮತ್ತು ಷಗಳ ನಡುವಿನ ವ್ಯತ್ಯಾಸವೂ ಅಸಮೀಸ್ ನುಡಿಯಲ್ಲಿಲ್ಲ. ಆದರೆ ಅಸಮೀಸ್ ಬರಹದಲ್ಲಿ ಇದೆ. ಬರಹದಲ್ಲಿ ಕಾಣಿಸುವ ಈ ಮೂರು ಬರಿಗೆಗಳನ್ನೂ ಜನರು ಒಂದೇ ರೀತಿಯಲ್ಲಿ ಉಲಿಯುತ್ತಾರೆ (ಇದನ್ನು ಕೆಳಗೆ ಹಕಾರವಾಗಿ ಕಾಣಿಸಲಾಗಿದೆ; ಆದರೆ ಇದರ ಉಲಿಪು ಹಕಾರಕ್ಕಿಂತ ಬೇರಾದುದು):

| ಅಸಮೀಸ್ ಬರಹ | ಅಸಮೀಸ್ ಉಲಿಪು |
|---|---|
| ಬಿಷ (ವಿಶ) | ಬಿಹ್ |
| ಬಿಶೇಷ (ವಿಶೇಶ) | ಬಿಹೆಹ್ |
| ಶಾಂತಿ | ಹನ್ತಿ |

| | |
|---|---|
| ಸಾಗರ | ಹಗೊರ್ |
| ಸಖೀ (ಗೆಳತಿ) | ಹಖಿ |

ಇಂತಹ ಇನ್ನೂ ಹಲವಾರು ವ್ಯತ್ಯಾಸಗಳು ಅಸಮೀಸ್ ಬರಹಕ್ಕೂ ಉಲಿಪಿಗೂ ನಡುವೆ ಕಾಣಿಸುತ್ತಿವೆ. ಇವುಗಳಿಂದಾಗಿ ಇವತ್ತು ಶಾಲೆಗಳಲ್ಲಿ ಅಸಮೀಸ್ ಬರಹವನ್ನು ಕಲಿಯುವುದೆಂದರೆ ಮಕ್ಕಳಿಗೆ ಹೊಸದೊಂದು ನುಡಿಯನ್ನು ಕಲಿಯುವಷ್ಟೇ ತೊಡಕಿನ ಕೆಲಸವಾಗಿದೆ.

ಅಸಮೀಸ್ ನುಡಿಯ ಈ ಬರವಣಿಗೆ ಹೆಚ್ಚಿನೆಡೆಗಳಲ್ಲೂ ಪದಗಳ ಹಿನ್ನಡವಳಿಯನ್ನು ಸೂಚಿಸುವುದರಿಂದ, ತೊಡಕಿನದಾದರೂ ಅದನ್ನು ಉಳಿಸಿಕೊಳ್ಳಬೇಕೆಂಬುದಾಗಿ ಅಸಮೀಸ್ ಪಂಡಿತರಿಗೆ ಅನಿಸುತ್ತದೆ. ಹಿಂದಿ, ಮರಾಟಿ, ಪಂಜಾಬಿ ಮೊದಲಾದ ಬೇರೆ ಇಂಡೋ-ಆರ್ಯನ್ ನುಡಿಗಳ ಹಾಗೆ ಅಸಮೀಸ್ ನುಡಿಗೂ ಸಂಸ್ಕೃತವೇ ಮೂಲನುಡಿಯಾದುದರಿಂದ, ಬರಹದಲ್ಲಿ ತಮ್ಮ ನುಡಿಯ ಪದಗಳಿಗಿರುವ ಸ್ವರೂಪ ಅವುಗಳ ಸಂಸ್ಕೃತ ಮೂಲವನ್ನು ನೆನಪಿಸುವ ಹಾಗಿದ್ದಲ್ಲಿ ಒಳ್ಳೆಯದು ಎಂದು ಅವರಿಗೆ ಅನಿಸುತ್ತದೆ.

ಆದರೆ, ನಿಜಕ್ಕೂ ಇದು ಬೇಕಾಗಿಲ್ಲ. ಯಾಕೆಂದರೆ, ಮಾತು ಕಾಗದದ ಮೇಲೆ ಕಾಣಿಸುವ ಹಾಗೆ ಮಾಡುವುದೇ ಬರಹದ ಮುಕ್ಯ ಉದ್ದೇಶವಲ್ಲದೆ ಮಾತಿನ ಹಿನ್ನಡವಳಿಯನ್ನು ತಿಳಿಸುವುದು ಅದರ ಉದ್ದೇಶವಲ್ಲ. ಮಾತಿನ ಹಿನ್ನಡವಳಿಯನ್ನು ತಿಳಿಯಬೇಕೆಂದಿರುವವರು ಅದನ್ನು ಬೇರಾಗಿ ಕಲಿತುಕೊಳ್ಳಬಹುದು. ಅದಕ್ಕಾಗಿ ಒಂದು ನುಡಿಯ ಬರಹವನ್ನೇ ಇಶ್ಟೊಂದು ತೊಡಕಿನದಾಗಿ ಮಾಡಬೇಕಾಗಿಲ್ಲ.

ನುಡಿಯ ಸ್ವರೂಪ ಮತ್ತು ಸ್ವಬಾವಗಳನ್ನು ತಿಳಿಯದವರು ನುಡಿಗೆ ಸಂಬಂದಿಸಿದ ವಿಶಯಗಳಿಗೆ ಕಯ್ಹಾಕಿದಲ್ಲಿ ಹೇಗೆ ಅನರ್ತಗಳುಂಟಾಗುತ್ತವೆ ಮತ್ತು ಅವುಗಳಿಂದೊದಗುವ ತೊಂದರೆಗಳನ್ನು ಹೇಗೆ ಇಡೀ ಸಮಾಜವೇ ಅನುಬವಿಸಬೇಕಾಗುತ್ತದೆ ಎಂಬುದಕ್ಕೆ ಅಸಮೀಸ್ ಬರಹದಲ್ಲಿ ಕೆಲವರು ಪಂಡಿತರು ಮಾಡಿರುವ ಈ ಬದಲಾವಣೆಗಳು ಒಳ್ಳೆಯ ಎತ್ತುಗೆಗಳಾಗಿವೆ.

# ೪ ಸರಿಪಡಿಕೆಯ ಎದುರಿಕೆಗಳು

## ೪.೧ ಸರಿಪಡಿಕೆಯ ಪ್ರಯೋಜನಗಳು

ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಈಗಿರುವ ಹಾಗೆ ಸಂಸ್ಕೃತದಲ್ಲಿರುವಂತೆಯೇ ಬರೆಯುವುದರಿಂದ ಕನ್ನಡಕ್ಕೆ ಇಲ್ಲವೇ ಕನ್ನಡಿಗರಿಗೆ ಯಾವ ಪ್ರಯೋಜನವೂ ಇಲ್ಲ; ಇದಕ್ಕೆ ಬದಲು, ಅವನ್ನು ಹೇಗೆ ಓದುತ್ತೇವೆಯೋ ಹಾಗೆಯೇ ಬರೆಯುವ ಹೊಸ ಬರಹವನ್ನು ಬಳಸಿದಲ್ಲಿ, ಹಲವು ಪ್ರಯೋಜನಗಳನ್ನು ಕನ್ನಡಿಗರು ಪಡೆಯಬಲ್ಲರು.

ಮೊದಲನೆಯದಾಗಿ, ಚಿಕ್ಕ ಮಕ್ಕಳಿಗೆ (ಅದರಲ್ಲೂ ಕೆಳವರ್ಗದ ಮಕ್ಕಳಿಗೆ) ಮತ್ತು ಬರಹಬಾರದ ದೊಡ್ಡವರಿಗೆ ಕನ್ನಡ ಬರಹವನ್ನು ಕಲಿಸುವ ಕೆಲಸ ಹೆಚ್ಚು ಸುಲಬವಾಗುತ್ತದೆ. ಹೊಸ ಬರಹವನ್ನು ಬಳಸಿದಲ್ಲಿ ಅವರಿಗೆ ೫೦ ಬರಿಗೆಗಳ ಬದಲು ಬರೇ ೩೧ ಬರಿಗೆಗಳನ್ನು ಕಲಿಸಿದರೆ ಸಾಕು.

ಈ ರೀತಿ ಕಲಿಯಬೇಕಾಗಿರುವ ಬರಿಗೆಗಳ ಎಣಿಕೆ ಕಡಿಮೆಯಾಗುತ್ತದೆ ಎಂಬುದು ಮಾತ್ರವಲ್ಲ, ಈ ಬರಿಗೆಗಳನ್ನೆಲ್ಲ ಓದುವ ಹಾಗೆಯೇ ಬರೆಯಲಾಗುತ್ತದೆ (ಎಂದರೆ ಒಂದೊಂದು ಬರಿಗೆಯ ಮೂಲಕವೂ ಒಂದೊಂದು ಉಲಿಯನ್ನು ಮಾತ್ರವೇ ಸೂಚಿಸಲಾಗುತ್ತದೆ) ಎಂಬುದೂ ಮಕ್ಕಳ ಕಲಿಕೆಯನ್ನು ಸುಲಬವಾಗಿಸುತ್ತದೆ.

ಯಾಕೆಂದರೆ, ಮಕ್ಕಳು ಬರಹಗಳನ್ನು ಸಲೀಸಾಗಿ ಓದಲು ಕಲಿಯಬೇಕಿದ್ದಲ್ಲಿ, ಮೊದಲಿಗೆ ತಮ್ಮ ನುಡಿಯ ಪದಗಳನ್ನು ಉಲಿಗಳ ಸೇರಿಕೆಯಿಂದ ಉಂಟುಮಾಡಲಾಗಿದೆ ಎಂಬುದನ್ನು ಅವರು ಗಮನಿಸಬೇಕು.

ಎತ್ತುಗೆಗೆ, ಮನೆ ಪದವನ್ನು ಮ್, ಅ, ನ್ ಮತ್ತು ಎ ಎಂಬ ನಾಲ್ಕು ಉಲಿಗಳ ಸೇರಿಕೆಯಿಂದ ಉಂಟುಮಾಡಲಾಗಿದೆ ಎಂಬುದನ್ನು ಅವರು ತಿಳಿಯಬೇಕು; ಮತ್ತು ಆಮೇಲೆ, ಈ ಉಲಿಗಳನ್ನು ಸೂಚಿಸುವುದಕ್ಕಾಗಿ ಬರಹದಲ್ಲಿ ಬೇರೆ ಬೇರೆ ಬರಿಗೆಗಳನ್ನು ಬಳಸಲಾಗಿದೆ ಎಂಬುದನ್ನು ಅವರು ಗಮನಿಸಬೇಕು.

ಬರಹದಲ್ಲಿ ಬರುವ ಬರಿಗೆಗಳು ನೇರವಾಗಿ ಉಲಿಗಳನ್ನು ಸೂಚಿಸುತ್ತಿವೆಯಾದರೆ ಮಾತ್ರ, ಈ ಎರಡನೆಯ ತಿಳುವಳಿಕೆಯನ್ನು ಅವರು ಸುಲಬವಾಗಿ ಪಡೆಯಬಲ್ಲರು. ಶ-ಷ, ಋ-ರು, ದ-ಧ, ಪ-ಫ ಮೊದಲಾದ ಎರಡೆರಡು ಬರಿಗೆಗಳನ್ನು ಒಂದೇ ಬಗೆಯಲ್ಲಿ ಓದುತ್ತಿರುವಂತಹ ಹಲವು ಸಂದರ್ಬಗಳಿರುವ ಇವತ್ತಿನ ಕನ್ನಡ ಬರಹವನ್ನು ಓದಲು ಕಲಿಯುವಾಗ, ಹೆಚ್ಚಿನ ಮಕ್ಕಳೂ ಈ ಎರಡನೆಯ ತಿಳುವಳಿಕೆಯನ್ನು ಪಡೆಯುವಲ್ಲಿ ಹಿಂದೆ ಬೀಳುತ್ತಾರೆ.

ಹೊಸ ಬರಹದಲ್ಲಿ ಎಲ್ಲಾ ಪದಗಳನ್ನೂ ಓದುವ ಹಾಗೆಯೇ ಬರೆಯುವ ಕಾರಣ, ಇವತ್ತು ಕನ್ನಡದಲ್ಲಿರುವ ಸ್ಪೆಲ್ಲಿಂಗ್ ಸಮಸ್ಯೆಗಳು ಪೂರ‍್ತಿ ಇಲ್ಲವಾಗುತ್ತವೆ.

ಇವತ್ತು ಕನ್ನಡದ ದಿನಪತ್ರಿಕೆಗಳಲ್ಲಿ, ಕತೆಕಾದಂಬರಿಗಳಲ್ಲಿ, ಮತ್ತು ಬೇರೆ ಬಗೆಯ ಬರಹಗಳಲ್ಲಿ ಎಲ್ಲಕ್ಕಿಂತ ಹೆಚ್ಚು ಅಚ್ಚಿನ ತಪ್ಪುಗಳು ಕಾಣಿಸುವುದು ಮಹಾಪ್ರಾಣ, ಷಕಾರ, ಮತ್ತು

ಋಕಾರಗಳ ಬಳಕೆಯಲ್ಲಿ. ಹೊಸ ಬರಹವನ್ನು ಬಳಸಲು ತೊಡಗಿದಲ್ಲಿ ಈ ತಪ್ಪುಗಳೆಲ್ಲವೂ ಇಲ್ಲವಾಗುತ್ತವೆ.

ಹಲವು ಜನರಿಗೆ ಹಕಾರದ (ಇಲ್ಲವೇ ಶಕಾರದ) ಬಳಕೆಯೂ ತೊಂದರೆಯದಾಗಿ ಕಾಣಿಸುತ್ತದೆ; ಯಾಕೆಂದರೆ, ಅವರು ಬಳಸುವ ಕನ್ನಡದ ಒಳನುಡಿಯಲ್ಲಿ ಈ ಬರಿಗೆಗಳಿಗೆ ಸಮನಾದ ಉಲಿಗಳಿಲ್ಲ; ಆದರೆ, ಸದ್ಯಕ್ಕಂತೂ ಆ ವಿಶಯದಲ್ಲಿ ನಾವೇನೂ ಮಾಡಲಾರೆವು. ಯಾಕೆಂದರೆ, ನಾವು ಬರಹಕ್ಕಾಗಿ ಆರಿಸಿ ಕೊಂಡಿರುವ ಮಾದರಿ ಕನ್ನಡದಲ್ಲಿ ಆ ಉಲಿಗಳನ್ನು ಉಳಿಸಿಕೊಳ್ಳ ಬೇಕಾಗಿದೆ.

ಬರಹಗಾರರಿಗೆ ಎಲ್ಲಿ ಯಾವ ಬರಿಗೆಗಳನ್ನು ಬಳಸಬೇಕು ಎಂಬ ವಿಶಯದಲ್ಲಿ ಸಂಶಯವೇಳುವುದು ಮೇಲಿನ ಮಹಾಪ್ರಾಣ, ಋ, ಷ ಮೊದಲಾದ ಬರಿಗೆಗಳ ಬಳಕೆಯಲ್ಲಿ ಮಾತ್ರ. ಅವನ್ನು ಓದುವ ಹಾಗೆ ಬರೆಯದಿರುವುದೇ ಇದಕ್ಕೆ ಕಾರಣ.

ಬರಹಗಾರರು ಈ ಸಂಶಯಗಳನ್ನು ಹೋಗಲಾಡಿಸಲು ಆಗಾಗ ಪದಕೋಶಗಳನ್ನು ತೆರೆಯಬೇಕಾಗುತ್ತದೆ. ಹೊಸ ಬರಹವನ್ನು ಬಳಸತೊಡಗಿದಲ್ಲಿ ಈ ಸಂಶಯಗಳೆಲ್ಲ ಇಲ್ಲವಾಗುತ್ತವೆ.

ಕೆಳವರ್ಗದ ಮಕ್ಕಳಿಗೆ ಉಲಿಪಿನಲ್ಲಿಲ್ಲದ ಈ ಹೆಚ್ಚಿನ ಬರಿಗೆಗಳನ್ನು ಕಲಿಯಲು ಮೇಲ್ವರ್ಗದ ಮಕ್ಕಳಿಗಿಂತಲೂ ಹೆಚ್ಚು ಕಶ್ಟವೆಂದೆನಿಸುತ್ತದೆ; ಶಾಲೆಗಳಲ್ಲಿ ಕಲಿಸುವವರೂ ಅವರನ್ನು ಈ ಕಾರಣಕ್ಕಾಗಿ ತೆಗಳುತ್ತಿರುತ್ತಾರೆ, ಮತ್ತು ಹೊಡೆಯು ತ್ತಿರುತ್ತಾರೆ. ಇದರಿಂದಾಗಿ, ಅವರಲ್ಲಿ ಕೀಳರಿಮೆ ಬೆಳೆಯುತ್ತದೆ, ಮತ್ತು ಅವರು ತಮ್ಮ ಕಲಿಕೆಯನ್ನೇ ಅರ್ದದಲ್ಲಿ ಬಿಟ್ಟುಬಿಡುತ್ತಾರೆ.

ಹೊಸ ಬರಹವನ್ನು ಬಳಸುವ ಮೂಲಕ, ಶಾಲೆಗಳಲ್ಲಿ ಮೇಲ್ವರ್ಗದ ಮಕ್ಕಳಿಗೂ ಕೆಳವರ್ಗದ ಮಕ್ಕಳಿಗೂ ನಡುವೆ ಮೂಡಿಬರುವ ಈ ವ್ಯತ್ಯಾಸವನ್ನು ಇಲ್ಲವಾಗಿಸಬಹುದು.

ಬರಹವನ್ನು ಕಲಿಯಲು ಹೊರಡುವ ದೊಡ್ಡವರಿಗೂ ಈ ಹೆಚ್ಚಿನ ಬರಿಗೆಗಳು ತೊಂದರೆ ಕೊಡುತ್ತವೆ. ತಮ್ಮ ಕಲಿಕೆಯನ್ನು ದಿನಪತ್ರಿಕೆಗಳನ್ನು ಓದುವಲ್ಲಿ, ಮತ್ತು ಬೇರೆ ಬಗೆಯ ಓದಿನ ಕೆಲಸಗಳನ್ನು ನಡೆಸುವಲ್ಲಿ ತೊಡಗಿಸಲು ಅವರು ಹೆಚ್ಚು ದಿವಸ ಕಾಯಬೇಕಾಗುತ್ತದೆ; ಇದಕ್ಕೆ ಬದಲು, ಹೊಸ ಬರಹವನ್ನು ಬಳಸಿದಲ್ಲಿ ಅವರು ಬಹಳ ಬೇಗನೆ ಅಂತಹ ಕೆಲಸಗಳಲ್ಲಿ ತೊಡಗಬಲ್ಲರು.

ಹೊಸ ಬರಹದಲ್ಲಿ ಬೆರಳಚ್ಚು ಮಾಡುವುದು ಮತ್ತು ಎಣ್ಣುಕ (ಕಂಪ್ಯೂಟರ್)ದಲ್ಲಿ ಬರೆಯುವುದು ಸುಲಬ; ಯಾಕೆಂದರೆ, ಶಿಫ್ಟ್ ಕೀಯನ್ನು ತುಂಬಾ ಕಡಿಮೆ ಬಾರಿ ಒತ್ತಬೇಕಾಗುತ್ತದೆ.

ಪದಗಳನ್ನು ಓದುವ ಹಾಗೆಯೇ ಬರೆಯುವ ಕಾರಣ, ಹೊಸಬರಹದಲ್ಲಿ ಬರಹಕ್ಕೂ ಆಡುಮಾತಿಗೂ ನಡುವಿರುವ ವ್ಯತ್ಯಾಸ ಕಡಿಮೆಯಾಗುತ್ತದೆ; ಬರಹದ ತೊಡಕುಗಳು ಮತ್ತು ಕ್ರುತಕತೆಗಳೂ ಕಡಿಮೆಯಾಗುತ್ತವೆ; ಮತ್ತು ಇದರಿಂದಾಗಿ, ಬರಹ ಹೆಚ್ಚು ಜೀವಂತವಾಗಿ ಕಾಣಿಸುತ್ತದೆ.

## ೪.೨ ತುಸುಹೊತ್ತಿನ ತೊಂದರೆಗಳು

ಮೇಲಿನ ಬದಲಾವಣೆಯನ್ನು ಮಾಡುವುದರಿಂದಾಗಿ ನಾವು ಎದುರಿಸಬೇಕಾಗುವ ತೊಂದರೆಗಳನ್ನು ಪರಿಶೀಲಿಸಿದಲ್ಲಿ, ಅವೆಲ್ಲವೂ ತುಸುಹೊತ್ತಿನ ತೊಂದರೆಗಳೆಂದು ಗೊತ್ತಾಗದಿರದು: ಎತ್ತುಗೆಗೆ, ಸಂಸ್ಕ್ರುತ ಎರವಲುಗಳನ್ನು ಹಳೇ ರೂಪದಲ್ಲಿ ನೋಡಿ

ಬಳಕೆಯಾದವರಿಗೆ ಅವನ್ನು ಈ ಹೊಸ ರೂಪದಲ್ಲಿ ನೋಡಿದಾಗ ಅದು ತಪ್ಪೆಂದು ಅನಿಸಬಹುದು; ಆದರೆ, ಹೊಸ ರೂಪವನ್ನು ನೋಡಿ ಬಳಕೆಯಾದ ಮೇಲೆ ಹಾಗೇನೂ ಅನಿಸಲಾರದು. ಹಾಗಾಗಿ, ಇದೊಂದು ತುಸುಹೊತ್ತಿನ ತೊಂದರೆ ಮಾತ್ರ.

ಹೊಸ ರೂಪವನ್ನು ನೋಡಿ ಬಳಕೆಯಾದವರಿಗೆ ಹಳೆ ಬರಹಗಳನ್ನು ಓದಲು ತುಸು ತೊಂದರೆಯಾಗಬಹುದು; ಆದರೆ, ಅ–ಬಗಳನ್ನು ಬಳಸಿರುವ ಹಳೆಗನ್ನಡ ಬರಹಗಳ ಓದಿನಲ್ಲಾಗುವ ತೊಂದರೆಗಿಂತ ಇದು ಹೆಚ್ಚಿನದೇನೂ ಅಲ್ಲ. ಇದಲ್ಲದೆ, ಓದಿನಲ್ಲಿಲ್ಲದಿರುವ ವ್ಯತ್ಯಾಸವನ್ನು ಬರಹದಲ್ಲಿ ಕಾಣಿಸ ಬೇಕಾಗಿರುವಲ್ಲಿ ಹೆಚ್ಚು ತೊಂದರೆಯಾಗುವುದು ಬರೆಯುವವರಿ ಗಲ್ಲದೆ ಓದುವವರಿಗಲ್ಲ.

ಹಳೆಗನ್ನಡವನ್ನು ಬಿಟ್ಟುಕೊಟ್ಟು ನಡುಗನ್ನಡ ಇಲ್ಲವೇ ಹೊಸಗನ್ನಡವನ್ನು ಬರಹಗಳಲ್ಲಿ ಬಳಸತೊಡಗಿದಾಗ ಇದಕ್ಕಿಂತಲೂ ಎಶ್ಟೋ ಪಾಲು ಹೆಚ್ಚಿನ ತೊಂದರೆಯನ್ನು ಬರಹಗಾರರು ಮತ್ತು ಓದುಗರು ಎದುರಿಸಿರಬೇಕು. ಯಾಕೆಂದರೆ, ಹಳೆಗನ್ನಡ ಮತ್ತು ನಡುಗನ್ನಡ ಇಲ್ಲವೇ ಹೊಸಗನ್ನಡಗಳ ನಡುವೆ ಬರಿಗೆಗಳ ಬಳಕೆಯಲ್ಲಶ್ಟೇ ಅಲ್ಲದೆ ಪದ, ಪದರೂಪ ಮತ್ತು ಸೊಲ್ಲುಗಳ ಬಳಕೆಯಲ್ಲೂ ಹಲವು ವ್ಯತ್ಯಾಸಗಳಿವೆ. ಇವತ್ತು ಹೊಸಗನ್ನಡವನ್ನು ಬಳಸುತ್ತಿರುವವರಿಗೆ ಹಳೆಗನ್ನಡದ ಬರಹಗಳನ್ನು ಓದಲು ಎಶ್ಟು ಕಶ್ಟವಾಗುತ್ತಿದೆಯೆಂಬುದನ್ನು ಗಮನಿಸಿದರೆ ಈ ವಿಶಯ ಸ್ಪಶ್ಟವಾಗುತ್ತದೆ.

ಬರಹದಲ್ಲಿ ಎಂತಹ ಮಾರ್‍ಪಾಡುಗಳನ್ನು ಮಾಡಬೇಕಿದ್ದರೂ ಇಂತಹ ಕೆಲವು ತುಸುಹೊತ್ತಿನ ತೊಂದರೆಗಳನ್ನು ಎದುರಿಸಲೇ ಬೇಕಾಗುತ್ತದೆ; ಇವಕ್ಕೆ ಅಂಜುವವರು ಯಾವ ಮಾರ್‍ಪಾಡನ್ನೂ ಮಾಡಲು ಹೋಗದೆ, ಅವುಗಳಿಂದ ದೊರಕಬಲ್ಲ ಪ್ರಯೋಜನ

ಗಳನ್ನೂ ಪಡೆಯದಿರುತ್ತಾರೆ. ಈ ಕೆಲವೇ ಕೆಲವು ತುಸುಹೊತ್ತಿನ ತೊಂದರೆಗಳಿಗಿಂತಲೂ ಮೇಲೆ ಕೊಟ್ಟಿರುವ ಪ್ರಯೋಜನಗಳೇ ಹೆಚ್ಚು ಆಕರ್ಶಕವಾಗಿವೆ.

ಹೊಸ ಬರಹವನ್ನು ಒಪ್ಪದಿರುವವರು ಅದನ್ನು ಬಳಸಲು ತೊಡಗಿದಲ್ಲಿ ಬೇರೆಯೂ ಕೆಲವು ತೊಡಕುಗಳು ಉಂಟಾಗಬಲ್ಲುವು ಎಂದು ಹೇಳುತ್ತಾರೆ; ಆದರೆ, ಇವುಗಳೆಲ್ಲ ಬರಹದ ನಿಜವಾದ ಸ್ವರೂಪವೇನು, ಮಾತಿಗೂ ಬರಹಕ್ಕೂ ನಡುವಿರುವ ಸಂಬಂದ ಎಂತಹುದು, ಮತ್ತು ಬರಹಕ್ಕೂ ನುಡಿಗೂ ನಡುವಿರುವ ಸಂಬಂದ ಎಂತಹುದು ಎಂಬುದನ್ನು ಸರಿಯಾಗಿ ತಿಳಿದುಕೊಳ್ಳದೆ ಹೇಳುವ ಮಾತುಗಳು ಮಾತ್ರ. ಅವು ನಿಜವಾದ ತೊಡಕುಗಳಲ್ಲ. ಇವುಗಳಲ್ಲಿ ಮುಕ್ಯವಾದ ಕೆಲವನ್ನು ಕೆಳಗೆ ವಿವರಿಸಲಾಗಿವೆ:

### ೪.೩ ಹೆಚ್ಚು ಬರಿಗೆಗಳಿರುವುದು ಶ್ರೀಮಂತಿಕೆಯಲ್ಲ

ಕನ್ನಡದ ಬರವಣಿಗೆಯಲ್ಲಿ ಮಹಾಪ್ರಾಣ, ಷಕಾರ, ಋಕಾರ ಮೊದಲಾದ ಹೆಚ್ಚಿನ ಬರಿಗೆಗಳಿರುವುದು ಅದರ ಶ್ರೀಮಂತಿಕೆ; ಅವನ್ನು ಕಡಿಮೆ ಮಾಡುವುದೆಂದರೆ ಆ ಶ್ರೀಮಂತಿಕೆಯನ್ನು ಕಳೆದುಕೊಂಡಂತೆ ಎಂಬುದಾಗಿ ಕೆಲವರು ವಾದಿಸುತ್ತಾರೆ. ಆದರೆ, ಈ ಬರಿಗೆಗಳ ಬಳಕೆಯನ್ನು ಗಮನಿಸಿದಲ್ಲಿ, ನಿಜಕ್ಕೂ ಅದು ಕನ್ನಡ ಬರಹದ ಶ್ರೀಮಂತಿಕೆಯಲ್ಲ, ಕಾಲ್ತೊಡಕು ಎಂಬುದು ಗೊತ್ತಾಗುತ್ತದೆ.

ಹಳೆಗನ್ನಡದ ಕಾಲದಲ್ಲಿ ರಕಾರ ಮತ್ತು ಳಕಾರಗಳು ಮಾತ್ರವಲ್ಲದೆ, ಱಕಾರ ಮತ್ತು ೞಕಾರಗಳೆಂಬ ಬೇರೆಯೂ ಎರಡು ಬರಿಗೆಗಳು ಬಳಕೆಯಲ್ಲಿದ್ದುವು; ಆಗಿನ ಕಾಲದ ಉಲಿಪಿನಲ್ಲೂ ಈ ಬರಿಗೆಗಳ ನಡುವೆ ವ್ಯತ್ಯಾಸವಿತ್ತು. ಆದರೆ, ಉಲಿಪಿನಲ್ಲಿದ್ದ ಈ ವ್ಯತ್ಯಾಸ ಆಮೇಲೆ ಇಲ್ಲವಾಯಿತು, ಮತ್ತು

ಈ ಕಾರಣಕ್ಕಾಗಿ ಬರಹದಿಂದಲೂ ಅವನ್ನು ಬಿಟ್ಟುಕೊಡಲಾಯಿತು.

ಹಳೆಗನ್ನಡದ ಬರಹಗಳ ಕಾಲದಲ್ಲಿ ಈ ಎರಡು ಹೆಚ್ಚಿನ ಬರಿಗೆಗಳಿದ್ದುದು ಆ ಕಾಲದ ಮಟ್ಟಿಗೆ ಕನ್ನಡ ಬರವಣಿಗೆಯ ಶ್ರೀಮಂತಿಕೆ ಎಂದು ಹೇಳಬಹುದು. ಯಾಕೆಂದರೆ, ಈ ವ್ಯತ್ಯಾಸವನ್ನು ಬರಹದಲ್ಲಿ ತೋರಿಸಿರಲಿಲ್ಲವಾದರೆ, ಎಲ್ಲಿ ರಕಾರವನ್ನು ಱ ಎಂಬುದಾಗಿ ಓದಬೇಕು, ಮತ್ತು ಎಲ್ಲಿ ಳಕಾರವನ್ನು ೞ ಎಂಬುದಾಗಿ ಓದಬೇಕು ಎಂಬುದು ಓದುಗರಿಗೆ ಗೊತ್ತಾಗುತ್ತಿರಲಿಲ್ಲ.

ಆದರೆ, ಈ ಉಲಿಗಳ ನಡುವಿನ ವ್ಯತ್ಯಾಸಗಳು ಇವತ್ತಿನ ಕನ್ನಡಿಗರ ಉಲಿಪಿನಲ್ಲಿ ಇಲ್ಲವೇ ಓದಿನಲ್ಲಿ ಉಳಿದುಕೊಂಡಿಲ್ಲ; ಹಾಗಾಗಿ, ಇವತ್ತಿನ ಕನ್ನಡಿಗರ ಮಟ್ಟಿಗೆ ಈ ಬರಿಗೆಗಳನ್ನು ಬರಹದಲ್ಲಿ ಉಳಿಸಿಕೊಳ್ಳುವುದು ತೊಡಕಾಗಬಲ್ಲುದಲ್ಲದೆ ಶ್ರೀಮಂತಿಕೆಯಾಗಲಾರದು.

ಯಾಕೆಂದರೆ, ಅವನ್ನು ಹಾಗೆ ಉಳಿಸಿಕೊಂಡಿದ್ದರೆ, ಕರೆ (ಬರಹೇಳು) : ಕಱೆ (ಹಾಲು ಕಱೆ), ಊರು (ಹಳ್ಳಿ) : ಊಱು (ನಿಲ್ಲಿಸು), ತೆರೆ (ಕಡಲಿನ ತೆರೆ) : ತೆಱೆ (ಬಾಗಿಲು ತೆಱೆ) ಎಂಬಂತಹ ಹಲವಾರು ಪದಜೋಡಿಗಳನ್ನು ಬರೆಯುವಾಗ, ಅವುಗಳಲ್ಲಿ ರಕಾರವನ್ನು ಎಲ್ಲಿ ಬಳಸಬೇಕು, ಮತ್ತು ಱಕಾರವನ್ನು ಎಲ್ಲಿ ಬಳಸಬೇಕು ಎಂಬುದನ್ನು ನೆನಪಿನಲ್ಲಿ ಇರಿಸಿಕೊಳ್ಳಬೇಕಾಗುತ್ತಿತ್ತು (ಮೇಲಿನ ಜೋಡಿಗಳಲ್ಲಿ ಮೊದಲನೆಯ ಪದದಲ್ಲಿ ರಕಾರವಿತ್ತು, ಮತ್ತು ಎರಡನೆಯ ಪದದಲ್ಲಿ ಱಕಾರವಿತ್ತು).

ಇದೇ ರೀತಿಯಲ್ಲಿ, ಉಳಿ (ಕೆತ್ತುವ ಉಳಿ) : ಉಳಿ (ಉಳಿಯು), ಎಳೆ (ಎಳತು) : ಎಳೆ (ಎಳೆದಾಡು), ಬಳಸು (ನೇರವಲ್ಲದ) : ಬಳಸು (ಉಪಯೋಗಿಸು) ಎಂಬಂತಹ ಹಲವಾರು ಪದಜೋಡಿಗಳನ್ನು ಬರೆಯುವಾಗ, ಅವುಗಳಲ್ಲಿ ಳಕಾರವನ್ನು ಯಾವ ಪದದಲ್ಲಿ ಬಳಸಬೇಕು, ಮತ್ತು ೞಕಾರವನ್ನು ಯಾವ ಪದದಲ್ಲಿ ಬಳಸಬೇಕು ಎಂಬುದನ್ನು ನೆನಪಿನಲ್ಲಿರಿಸಿಕೊಳ್ಳಬೇಕಾಗುತ್ತಿತ್ತು (ಈ ಜೋಡಿಗಳ ಮೊದಲನೆಯ ಪದದಲ್ಲಿ ಳಕಾರವಿತ್ತು, ಮತ್ತು ಎರಡನೆಯ ಪದದಲ್ಲಿ ೞಕಾರವಿತ್ತು).

ಹೊಸಗನ್ನಡದ ಬರಹಗಾರರು ಈ ಉಲಿಪಿನಲ್ಲಿಲ್ಲದ (ಓದಿನಲ್ಲಿಲ್ಲದ) ವ್ಯತ್ಯಾಸವನ್ನು ಬರಹದಲ್ಲಿ ಉಳಿಸಿಕೊಳ್ಳುವುದು ಬೇಡವೆಂದು ತೀರ್ಮಾನಿಸಿದುದರಿಂದಾಗಿ ಇವತ್ತು ಶಾಲೆಯಲ್ಲಿ ಕನ್ನಡ ಕಲಿಯುವ ಮಕ್ಕಳಿಗೆ, ಮತ್ತು ಆಮೇಲೆ ಕನ್ನಡವನ್ನು ಬರೆಯಲು ಬಳಸುವ ದೊಡ್ಡವರಿಗೆ ಇಂತಹ ನೂರಾರು ಪದಗಳ ರೂಪಗಳನ್ನು ನೆನಪಿನಲ್ಲಿರಿಸಿಕೊಳ್ಳುವ ತಲೆನೋವಿಲ್ಲ.

ಸಂಸ್ಕೃತದ ಎರವಲುಗಳಲ್ಲಿ ಬರುವ ಷಕಾರ, ಋಕಾರ, ಮಹಾಪ್ರಾಣ ಮೊದಲಾದುವುಗಳ ಕತೆಯೂ ಇಂತಹದೇ. ಅವು ಹೆಚ್ಚಿನ ಕನ್ನಡಿಗರ ಉಲಿಪಿನಲ್ಲಿ ಇಲ್ಲವೇ ಓದಿನಲ್ಲಿ ಕಾಣಿಸುವುದಿಲ್ಲ. ಹಾಗಾಗಿ, ಅವನ್ನು ಬರಹದಲ್ಲಿ ಬಳಸದಿರುವುದೇ ಕನ್ನಡಿಗರ ಮಟ್ಟಿಗೆ ಸರಿಯಾದ ಮತ್ತು ಸುಲಬವಾದ ದಾರಿ. ಹಾಗೆ ಮಾಡಿದಲ್ಲಿ, ಈ ಎರವಲು ಪದಗಳನ್ನು ಉಲಿಯುವ ಹಾಗೆಯೇ ಬರೆಯುವ ಕಾರಣ, ಇವತ್ತಿನ ಹಾಗೆ, ಷ, ಋ, ಮಹಾಪ್ರಾಣ ಮೊದಲಾದ ಬರಿಗೆಗಳು ಮೂಲ ಸಂಸ್ಕೃತದ ಯಾವ ಪದಗಳಲ್ಲಿ ಮತ್ತು ಯಾವ ಜಾಗದಲ್ಲಿ ಬರುತ್ತವೆ ಎಂಬುದನ್ನು ನೆನಪಿನಲ್ಲಿ ಇರಿಸಿಕೊಳ್ಳಬೇಕಾಗುವುದಿಲ್ಲ.

ಕನ್ನಡದಲ್ಲಿ ಎ-ಏ ಮತ್ತು ಒ-ಓ ತೆರೆಯುಲಿಗಳ ನಡುವೆ ಉಲಿಪಿನಲ್ಲಿ ವ್ಯತ್ಯಾಸ ಇದೆ, ಮತ್ತು ಅದನ್ನು ತೋರಿಸಿಕೊಡುವುದಕ್ಕಾಗಿ ಬರಿಗೆಗಳಲ್ಲೂ ವ್ಯತ್ಯಾಸ ಇದೆ; ಹಾಗಾಗಿ, ಕನ್ನಡ ಬರಹದಲ್ಲಿ ಈ ಬರಿಗೆಗಳಿರುವುದು ಅದರ ಶ್ರೀಮಂತಿಕೆಯೆಂದು ಹೇಳಬಹುದು. ಆದರೆ, ಸಂಸ್ಕೃತದ ದೇವನಾಗರಿ ಬರವಣಿಗೆಯಲ್ಲಿ ಈ ವ್ಯತ್ಯಾಸವನ್ನು ತೋರಿಸಿಕೊಡಬಲ್ಲ ಬರಿಗೆಗಳಿಲ್ಲ. ಹಾಗಿದ್ದರೆ, ಇದು ಸಂಸ್ಕೃತ ಬರವಣಿಗೆಯ ಬಡತನವೆಂದು ಹೇಳಬಹುದೇ?

ನಿಜಕ್ಕೂ ಸಂಸ್ಕೃತದ ಪದಗಳ ಓದಿನಲ್ಲಿ ಇಲ್ಲವೇ ಉಲಿಪಿನಲ್ಲಿ ಎ-ಏ ಮತ್ತು ಒ-ಓಗಳ ನಡುವಿನ ವ್ಯತ್ಯಾಸಗಳು ಹುರುಳನ್ನು ತಿಳಿಸುವುದಕ್ಕಾಗಿ ಬಳಕೆಯಾಗುವುದಿಲ್ಲ; ಹಾಗಾಗಿ, ಸಂಸ್ಕೃತ ಪದಗಳನ್ನು ಬರಹಕ್ಕಿಳಿಸಲು ಅಂತಹ ಬರಿಗೆಗಳು ಬೇಕಾಗುವುದಿಲ್ಲ; ಬೇಡದಿರುವ ಬರಿಗೆಗಳು ಒಂದು ಬರವಣಿಗೆಯಲ್ಲಿವೆಯಾದರೆ, ಅದನ್ನು ಕಲಿಯುವವರಿಗೆ ಮತ್ತು ಬಳಸುವವರಿಗೆ ಅವು ತೊಡಕಾಗಬಲ್ಲುವು. ಹಾಗಾಗಿ, ಎ-ಏ ಮತ್ತು ಒ-ಓಗಳ ನಡುವಿನ ವ್ಯತ್ಯಾಸಗಳನ್ನು ಸೂಚಿಸುವ ಬರಿಗೆಗಳು ಸಂಸ್ಕೃತ ಬರವಣಿಗೆಯಲ್ಲಿಲ್ಲದಿರುವುದು ಆ ನುಡಿಯ ಮಟ್ಟಿಗೆ ಸರಿಯಾಗಿದೆ; ಅದು ಆ ಬರಹದ ಬಡತನವನ್ನೇನೂ ಸೂಚಿಸುವುದಿಲ್ಲ.

ಈ ರೀತಿ, ಒಂದು ನುಡಿಯ ಬರವಣಿಗೆಯಲ್ಲಿ ಆ ನುಡಿಯನ್ನು ಬರಹಕ್ಕಿಳಿಸಲು ಬೇಕಾಗುವುದಕ್ಕಿಂತ ಹೆಚ್ಚು ಬರಿಗೆಗಳಿರುವುದು ಅದರ ಶ್ರಿಮಂತಿಕೆಯಲ್ಲ; ಹಾಗಾಗಿ, ಅಂತಹ ಹೆಚ್ಚಿನ ಬರಿಗೆಗಳನ್ನು ಬಿಟ್ಟುಕೊಡುವ ಮೂಲಕ ಆ ಬರಹವನ್ನು ಕಲಿಯುವ ಮತ್ತು ಬಳಸುವ ಕೆಲಸ ಸುಲಬವಾಗುವಂತೆ ಮಾಡುವುದೇ ಸರಿಯಾದ ದಾರಿ; ಹೀಗೆ ಮಾಡಿದಲ್ಲಿ, ನಾವು ನಮ್ಮ ಬರಹದಲ್ಲಿ ನಮಗೆ

ಬೇಡದಿರುವ ತೊಡಕನ್ನು ಕಳೆದುಕೊಳ್ಳುತ್ತೇವಲ್ಲದೆ, ಬೇಕಾಗಿರುವುದೇನನ್ನೂ ಕಳೆದುಕೊಳ್ಳುವುದಿಲ್ಲ.

ಹಾಗಾಗಿ, ಅಂತಹ ಮಾರ್‍ಪಾಡನ್ನು ನಡೆಸುವುದೆಂದರೆ, ಕೆಳವರ‍್ಗದವರನ್ನು ಮೇಲೆತ್ತುವ ಬದಲು ಮೇಲ್ವರ‍್ಗದವರನ್ನು ಕೆಳಗಿಳಿಸಿದಂತೆ ಎಂಬುದಾಗಿ ಕೆಲವರು ವಾದಿಸುತ್ತಾರಲ್ಲ, ಅದು ಮಾತು ಮತ್ತು ಬರಹಗಳ ನಡುವಿನ ಗೊಂದಲದಿಂದುಂಟಾದ ತಪ್ಪು ವಾದವಲ್ಲದೆ ಬೇರೇನಲ್ಲ.

## ೪.೪ ಉಲಿಗಳ ಬಳಕೆಯಲ್ಲಿ ವ್ಯತ್ಯಾಸಗಳು

ಪದಗಳನ್ನು ಉಲಿಯುವಲ್ಲಿ ಎಶ್ಟು ಉಲಿಗಳನ್ನು ಬಳಸಲಾಗುತ್ತದೆ, ಮತ್ತು ಯಾವ ಉಲಿಗಳನ್ನು ಬಳಸಲಾಗುತ್ತವೆ ಎಂಬ ವಿಶಯದಲ್ಲಿ ನುಡಿಗಳು ಒಂದರಿಂದೊಂದು ತೀರಾ ಬೇರಾಗಿರಬಲ್ಲುವು. ಮೇಲೆ ವಿವರಿಸಿದ ಹಾಗೆ, ಕನ್ನಡದಲ್ಲಿ ಎ-ಏ ಮತ್ತು ಒ-ಓಗಳ ನಡುವೆ ವ್ಯತ್ಯಾಸವಿದೆ, ಆದರೆ ಸಂಸ್ಕ್ರುತದಲ್ಲಿ ಇಲ್ಲ; ಸಂಸ್ಕ್ರುತದಲ್ಲಿ ಮಹಾಪ್ರಾಣ-ಅಲ್ಪಪ್ರಾಣಗಳ ನಡುವೆ ವ್ಯತ್ಯಾಸವಿದೆ, ಕನ್ನಡದಲ್ಲಿ ಇಲ್ಲ.

ಕನ್ನಡದ ಉಲಿಗಳನ್ನು ಬರೆಯಲು ಒಟ್ಟು ಮೂವತ್ತೊಂದು ಬರಿಗೆಗಳಿದ್ದರೆ ಸಾಕಾಗುತ್ತದೆ; ಆದರೆ, ಬೊತ್ಸ್ವಾನಾ(ಆಪ್ರಿಕಾ)ದ ಕೆಲವು ನುಡಿಗಳ ಉಲಿಗಳನ್ನು ಬರೆಯಲು ನೂರಕ್ಕಿಂತಲೂ ಹೆಚ್ಚು ಬರಿಗೆಗಳು ಇಲ್ಲವೇ ಬರಿಗೆಕಂತೆಗಳು ಬೇಕಾಗುತ್ತವೆ. ಇದಕ್ಕೆ ಬದಲು, ಪಾಪುವಾ ನ್ಯೂಗಿನಿಯ ರೊತೋಕಸ್ ಎಂಬ ನುಡಿಯನ್ನು ಬರೆಯಲು ಬರೇ ಹನ್ನೆರಡು ಬರಿಗೆಗಳು (ಏಳು ಮುಚ್ಚುಲಿ ಬರಿಗೆಗಳು ಮತ್ತು ಅಯ್ದು ತೆರೆಯುಲಿ ಬರಿಗೆಗಳು) ಸಾಕಾಗುತ್ತವೆ.

ಜಗತ್ತಿನ ನುಡಿಗಳಲ್ಲಿ ಬಳಕೆಯಾಗುವ ಎಲ್ಲಾ ಉಲಿಗಳನ್ನೂ ಬರೆಯಬೇಕಿದ್ದಲ್ಲಿ ನೂರಾರು ಬರಿಗೆಗಳನ್ನು, ಬರಿಗೆಕಂತೆಗಳನ್ನು, ಮತ್ತು ಬರಿಗೆ ಗುರುತುಗಳನ್ನು ಬಳಸಬೇಕಾಗುತ್ತದೆ. ಇದಕ್ಕಾಗಿ ಉಲಿಯರಿಗರು (ದ್ವನಿವಿಜ್ನಾನಿಗಳು) ಹಲವಾರು ಬರಿಗೆಗಳನ್ನು ಮತ್ತು ಬರಿಗೆ ಗುರುತುಗಳನ್ನು ಉಂಟುಮಾಡಿಕೊಂಡಿದ್ದಾರೆ.

ಹಾಗಾಗಿ, ಯಾವುದೇ ಒಂದು ನುಡಿಯಲ್ಲಿ ಬೇಕಾದುದಕ್ಕಿಂತ ಹೆಚ್ಚು ಬರಿಗೆಗಳಿದ್ದಲ್ಲಿ, ಅವುಗಳ ನೆರವಿನಿಂದ ಬೇರೆ ನುಡಿಗಳ ಪದಗಳನ್ನು ಆ ನುಡಿಗಳಲ್ಲಿರುವಂತೆಯೇ ಬರೆಯಬಹುದು ಎಂಬುದು ಪೊಳ್ಳು ವಾದ. ನಿಜಕ್ಕೂ ಕನ್ನಡದಲ್ಲಿ ಹೆಚ್ಚಿಗಿರುವ ಬರಿಗೆಗಳ ನೆರವಿನಿಂದ ಸಂಸ್ಕ್ರುತದ ಪದಗಳನ್ನು ಮಾತ್ರ (ಅದರಲ್ಲೂ ಒಂದೆರಡು ಉಲಿಗಳನ್ನು ಹೊರತುಪಡಿಸಿ) ಅದರಲ್ಲಿರುವ ಹಾಗೆಯೇ ಬರೆಯಲು ಬರುತ್ತದಲ್ಲದೆ ಬೇರೆ ನುಡಿಗಳ ಪದಗಳನ್ನು ಅವುಗಳಲ್ಲಿರುವ ಹಾಗೆ ಬರೆಯಲು ಸಾದ್ಯವಾಗದು.

ಇದಲ್ಲದೆ, ಕನ್ನಡದ್ದೇ ಆದ ಒಳನುಡಿಗಳ ಉಲಿಗಳನ್ನು ಬರೆಯುವಲ್ಲೂ ಈ ಹೆಚ್ಚಿನ ಬರಿಗೆಗಳು ನೆರವಾಗಲಾರವು. ಎತ್ತುಗೆಗೆ, ಗುಲ್ಬರ್ಗ ಕನ್ನಡದಲ್ಲಿ ಬರುವ ಎರಡು ಬಗೆಯ ಅಕಾರಗಳನ್ನು ಬರೆಯಲು ಕನ್ನಡದಲ್ಲಿ ಬರಿಗೆಗಳಿಲ್ಲ; ಸುಳ್ಯದ ಗವ್ಡ ಕನ್ನಡದಲ್ಲಿ ಬರುವ ಎರಡು ಬಗೆಯ ಉಕಾರಗಳನ್ನು ಬರೆಯಲೂ ಅದರಲ್ಲಿ ಬರಿಗೆಗಳಿಲ್ಲ.

ಇಂಗ್ಲಿಶ್, ಹಿಂದಿ ಮೊದಲಾದ ಬೇರೆ ಕೆಲವು ನುಡಿಗಳಿಂದ ಎರವಲಾಗಿ ಪಡೆದ ಪದಗಳನ್ನು ಬರೆಯಲು ಫ಼ಕಾರ-ಜ಼ಕಾರ ಗಳಂತಹ ಕೆಲವು ಹೆಚ್ಚಿನ ಬರಿಗೆಗಳನ್ನು ಉಂಟುಮಾಡಿಕೊಳ್ಳ ಬೇಕಾಗಿದೆ. ಇವನ್ನು ಕೆಲವರು ಬೇರೆಯಾಗಿ ಓದುತ್ತಾರೆ, ಮತ್ತು

ಅದಕ್ಕಾಗಿ ಅವನ್ನು ಬೇರೆಯಾಗಿ ಗುರುತಿಸಲು ಹೆಚ್ಚಿನ ಬರಿಗೆಗಳನ್ನು ಬಳಸಿಕೊಳ್ಳುತ್ತಿದ್ದಾರೆ. ಆದರೆ, ಎಲ್ಲರೂ ಇವನ್ನು ಬಳಸುವುದಿಲ್ಲ.

## ೪.೫ ಇಪ್ಪುರುಳಿನಿಂದ ತೊಂದರೆಯೇನಿಲ್ಲ

ಮದ್ಯ-ಮಧ್ಯ, ಎಂಬಂತಹ ಪದಜೋಡಿಗಳ ನಡುವಿನ ವ್ಯತ್ಯಾಸವನ್ನು ಇಲ್ಲವಾಗಿಸಿದಲ್ಲಿ ಇಪ್ಪುರುಳಿನ ತೊಂದರೆ (ಅರ್ತ ಸಂದಿಗ್ದತೆ) ಬರಬಲ್ಲುದು ಎಂಬುದು ಈ ಮಾರ್ಪಾಡನ್ನು ಎದುರಿಸುವವರು ನಮ್ಮ ಮುಂದಿರಿಸುವ ಇನ್ನೊಂದು ವಾದ. ಇದಕ್ಕೆ ಎರಡು ಬಗೆಯ ಉತ್ತರಗಳನ್ನು ಕೊಡಬಹುದು:

ಮೊದಲನೆಯದಾಗಿ, ಮಾತಿನಲ್ಲಿ (ಇಲ್ಲವೇ ಓದಿನಲ್ಲಿ) ಇಂತಹ ಪದಜೋಡಿಗಳೆಲ್ಲ ಒಂದೇ ರೂಪದಲ್ಲಿ ಬರುತ್ತವೆ; ಯಾಕೆಂದರೆ, ಅಲ್ಪಪ್ರಾಣ-ಮಹಾಪ್ರಾಣಗಳ ನಡುವಿನ ವ್ಯತ್ಯಾಸ ನಮ್ಮ ಬರಹದಲ್ಲಿದೆಯಲ್ಲದೆ ಮಾತಿನಲ್ಲಿಲ್ಲ. ಹಾಗಿದ್ದರೂ, ಅವುಗಳಿಂದಾಗಿ ಇನ್ನೊಬ್ಬರ ಮಾತನ್ನು (ಇಲ್ಲವೇ ಓದನ್ನು) ತಿಳಿದುಕೊಳ್ಳುವಲ್ಲಿ ನಮಗೆ ಯಾವ ತೊಂದರೆಯೂ ಆಗುವುದಿಲ್ಲ.

ಎರಡನೆಯದಾಗಿ, ಎಲ್ಲಾ ನುಡಿಗಳಲ್ಲೂ ನೂರಾರು ಇಪ್ಪುರುಳಿನ ಪದಗಳು ಬಳಕೆಯಾಗುತ್ತಿರುತ್ತವೆ; ಒಂದು ಪದಕೋಶವನ್ನು ತೆರೆದು ನೋಡಿದರೆ ಈ ವಿಶಯ ಸ್ಪಶ್ಟವಾಗುತ್ತದೆ: ಅದರಲ್ಲಿ ಬರುವ ಹೆಚ್ಚಿನ ಪದಗಳಿಗೂ ಒಂದಕ್ಕಿಂತ ಹೆಚ್ಚು ಹುರುಳುಗಳಿರುತ್ತವೆ. ಸಂಸ್ಕ್ರುತದ ಕೆಲವು ಪದಗಳಿಗಂತೂ ಹತ್ತಿಪ್ಪತ್ತು ಹುರುಳುಗಳಿರುವುದನ್ನು ಕಾಣಬಹುದು.

ಸಾಮಾನ್ಯವಾಗಿ, ಪದಗಳನ್ನು ಬಳಸಿರುವ ಸಂದರ್ಬವೇ ಅವುಗಳ ಹಲವು ಹುರುಳುಗಳಲ್ಲಿ ಯಾವುದು ಆಡುಗನ ಮನಸ್ಸಿನಲ್ಲಿದೆ ಎಂಬುದನ್ನು ತಿಳಿಸುತ್ತದೆ.

ಎತ್ತುಗೆಗೆ, ಕನ್ನಡದ ಹಾಲು ಎಂಬ ಪದಕ್ಕೆ ದನದ ಹಾಲು ಎಂಬ ಹುರುಳೂ ಇದೆ, ಮತ್ತು ಗಿಡದ ಸೊನೆ ಎಂಬ ಹುರುಳೂ ಇದೆ; ಆದರೆ, ಯಾರಾದರೂ ಕುಡಿಯಲು ಒಂದು ಲೋಟ ಹಾಲು ಬೇಕು ಎಂದು ಹೇಳಿದಲ್ಲಿ, ಆತನ ಮನಸ್ಸಿನಲ್ಲಿರುವುದು ಮೊದಲನೆಯ ಹುರುಳಿನ ಹಾಲಲ್ಲದೆ ಎರಡನೆಯ ಹುರುಳಿನ ಹಾಲಲ್ಲ ಎಂಬುದು ಎಲ್ಲರಿಗೂ ಗೊತ್ತಾಗುತ್ತದೆ.

ಇಪ್ಪುರುಳಿನ ಪದಗಳನ್ನು ಅವುಗಳ ಎರಡು ಹುರುಳುಗಳೂ ಒಟ್ಟಿಗೆ ಬರುವಂತೆ ಬಳಸುವುದು ಕವಿಗಳು ಮತ್ತು ಬೇಕೆಂದೇ ತಮ್ಮ ಕೇಳುಗರು ಗೊಂದಲದಲ್ಲಿ ಸಿಲುಕುವಂತೆ ಮಾಡಲು ಬಯಸುವವರು ಮಾತ್ರ.

ಸಾಮಾನ್ಯವಾಗಿ, ಅಂತಹ ಪದಗಳ ಒಂದು ಹುರುಳು (ಬಳಸಿದ ಸಂದರ್ಬಕ್ಕೆ ಸರಿಯಾಗಿರುವಂತಹದು) ಮಾತ್ರ ಕೇಳುವವರ ಮನಸ್ಸಿನಲ್ಲಿ ಮೂಡುತ್ತದೆ. ಎರಡನೆಯ ಹುರುಳನ್ನು ಮನಸ್ಸಿಗೆ ತರಲು ಅವರು ಸಾಕಶ್ಟು ಕಶ್ಟ ಪಡಬೇಕಾಗುತ್ತದೆ.

ಕೆಲವರಂತೂ ಆ ಪದಕ್ಕೆ ಎರಡನೆಯ (ಬಳಸಿದ ಸಂದರ್ಬಕ್ಕೆ ಹೊಂದಿಕೆಯಾಗದ) ಹುರುಳೇ ಇಲ್ಲವೆಂದೂ ವಾದಿಸಲು ಹೊರಡುತ್ತಾರೆ. ಅದನ್ನು ಬೇರೆ ಬಗೆಯ ಸೊಲ್ಲಿನಲ್ಲಿ ಬಳಸಿದಾಗ ಮಾತ್ರ ಅವರ ಮನಸ್ಸಿನಲ್ಲಿ ಆ ಹುರುಳು ಮೂಡುತ್ತದೆ.

ಹಾಗಾಗಿ, ಸಂಸ್ಕ್ರುತ ಎರವಲುಗಳನ್ನು ಓದುವ ಹಾಗೆಯೇ ಬರೆಯತೊಡಗಿದರೆ ಇಪ್ಪುರುಳಿನ ತೊಂದರೆ ಬರಬಲ್ಲುದು ಎಂಬ ವಾದಕ್ಕೆ ಯಾವ ಆದಾರವೂ ಇಲ್ಲ.

## ೪.೬ ಮಾರ್ಪಾಡು ಬರಹದಲ್ಲಲ್ಲದೆ ನುಡಿಯಲ್ಲಲ್ಲ

ಹೊಸಬರಹ ಒಪ್ಪಿಗೆಯಿಲ್ಲವೆನ್ನುವ ಹಲವು ಮಂದಿಗೆ ಈ ಮಾರ್ಪಾಡನ್ನು ಎಲ್ಲಿ ನಡೆಸಲಾಗುತ್ತಿದೆ ಎಂಬುದೇ ಸರಿಯಾಗಿ ಗೊತ್ತಾಗಿಲ್ಲ. ಈ ಅಜ್ಞಾನದಿಂದಾಗಿ, ಅವರು ಹೊಸಬರಹ ಕನ್ನಡವನ್ನೇ ಕೊಲೆಮಾಡುತ್ತದೆ ಎಂಬುದಾಗಿ ಬ್ರಮಿಸುತ್ತಿದ್ದಾರೆ.

ನಿಜಕ್ಕೂ ಇದು ಕನ್ನಡ ನುಡಿಯ ಮಾರ್ಪಾಡೇ ಅಲ್ಲ; ಕನ್ನಡದ ಉಲಿಗಳನ್ನು ಕಡಿಮೆ ಮಾಡುವ ಪ್ರಯತ್ನವೂ ಅಲ್ಲ. ಯಾಕೆಂದರೆ, ಹೆಚ್ಚಿನ ಕನ್ನಡಿಗರ ಮಾತಿನಲ್ಲೂ ಷಕಾರ, ವಿಸರ್ಗ, ಋಕಾರ, ಮಹಾಪ್ರಾಣ ಮೊದಲಾದ ಈ ಬರಿಗೆಗಳಿಗೆ ಸಮನಾದ ಉಲಿಗಳೇ ಇಲ್ಲ. ಹಾಗಾಗಿ, ಅವನ್ನು ಕನ್ನಡ ನುಡಿಯಲ್ಲಿ ಮಾರ್ಪಡಿಸುವ ಇಲ್ಲವೇ ಕನ್ನಡ ನುಡಿಯಿಂದ ತೆಗೆದು ಹಾಕುವ ಪ್ರಶ್ನೆಯೇ ಇಲ್ಲಿ ಏಳುವುದಿಲ್ಲ.

ನುಡಿ ಇಲ್ಲವೇ ಬಾಶೆ ಎಂಬುದು ಮುಕ್ಯವಾಗಿ ಮಾತಲ್ಲದೆ ಬರಹವಲ್ಲ. ಹಾಗಾಗಿ, ಬರಹದಲ್ಲಿ ಮಾಡುವ ಯಾವ ವ್ಯತ್ಯಾಸವೂ ನೇರವಾಗಿ ಮಾತನ್ನು ಇಲ್ಲವೇ ನುಡಿಯನ್ನು ತಾಗುವುದಿಲ್ಲ. ಇದಲ್ಲದೆ, ಮೇಲೆ ಸೂಚಿಸಿದ ಮಾರ್ಪಾಡುಗಳು ಬರಹವನ್ನು ಮಾತಿನ ಹತ್ತಿರಕ್ಕೆ ತರುತ್ತವಲ್ಲದೆ ದೂರ ಮಾಡುವುದಿಲ್ಲ.

ಬರಹವನ್ನು ಈ ರೀತಿ ಮಾತಿಗೆ ಹತ್ತಿರ ಬರುವಂತೆ ಮಾಡಿದರೆ ಬರಹ ಕೆಟ್ಟುಹೋಗುತ್ತದೆ ಎಂದು ಹೇಳುವವರಿಗೆ ಮಾತಿನ ಕುರಿತಾಗಿ ಕೀಳರಿಮೆಯಿದೆ. ಮಾತಿನ ಮೇಲ್ಮೆಯನ್ನು ಅವರು ಸರಿಯಾಗಿ ತಿಳಿದುಕೊಂಡಿಲ್ಲ. ಮಾತಿಗಿಂತ ಬರಹ ಮೇಲು ಎಂಬ ತಪ್ಪು ಕಲ್ಪನೆಯನ್ನು ಅವರು ಹೊಂದಿದ್ದಾರೆ.

## ೪.೭ ಕನ್ನಡದ ಓದೂ ಸಂಸ್ಕೃತ ಓದಿನಂತಿರಬೇಕೇ?

ಸಂಸ್ಕೃತ ಪದಗಳನ್ನು ಅದರಲ್ಲಿರುವ ಹಾಗೆ ಕನ್ನಡದಲ್ಲೂ ಬರೆಯುವ ಇವತ್ತಿನ ಕಟ್ಟಲೆಯನ್ನು ಉಳಿಸಿಕೊಳ್ಳಬೇಕೆಂದು ಹೇಳುವವರಲ್ಲಿ ಕೆಲವರಿಗೆ ಎಲ್ಲಾ ಕನ್ನಡಿಗರೂ ಈ ಪದಗಳನ್ನು ಸಂಸ್ಕೃತದಲ್ಲಿರುವ ಹಾಗೆಯೇ ಉಲಿಯಬೇಕು, ಮತ್ತು ಹಾಗೆ ಉಲಿಯದಿರುವುದು ತಪ್ಪು ಎಂಬ ಅನಿಸಿಕೆಯೂ ಇದೆ. ಆದರೆ, ನಿಜಕ್ಕೂ ಕನ್ನಡಿಗರಿಗೆ ಇದು ಬೇಕಾಗಿದೆಯೇ ಎಂಬುದನ್ನು ಅವರು ಆಲೋಚಿಸಿದಂತಿಲ್ಲ.

ಇವತ್ತಿನ ಪರಿಸ್ಥಿತಿಯೇನೆಂದರೆ, ಹೆಚ್ಚಿನ ಕನ್ನಡಿಗರೂ ಈ ಸಂಸ್ಕೃತ ಪದಗಳನ್ನು ಉಲಿಯುವಾಗ ಶ-ಷಗಳ ನಡುವೆ, ಇಲ್ಲವೇ ಮಹಾಪ್ರಾಣ-ಅಲ್ಪಪ್ರಾಣಗಳ ನಡುವೆ ಯಾವ ವ್ಯತ್ಯಾಸವನ್ನೂ ಮಾಡುವುದಿಲ್ಲ. ಶಾಲೆಗಳಲ್ಲಿ ಮಕ್ಕಳಿಗೆ ಇವನ್ನು ಕಲಿಸುವಾಗಲೂ ದೊಡ್ಡ-ಕ, ಚಿಕ್ಕ-ಕ, ಮುರುಟು-ಶ, ಪಟ್ಟೆ-ಶ ಎಂಬುದಾಗಿ ಇವನ್ನು ಹೆಸರಿಸಿ ಕಲಿಸುತ್ತಿದ್ದಾರೆ; ಅವನ್ನು ಸರಿಯಾಗಿ ಉಲಿದು ಕಲಿಸಲು ಹೆಚ್ಚಿನ ಕಲಿಸುಗರಿಗೂ ಬರುವುದಿಲ್ಲ.

ಇದಲ್ಲದೆ, ಕೆಲವು ಮಂದಿ ಸಂಸ್ಕೃತ ಪಂಡಿತರ ಮಾತನ್ನು ಗಮನಿಸಿದಾಗಲೂ ಇಂತಹದೇ ಪರಿಸ್ಥಿತಿಯಿರುವುದು ಕಂಡುಬರುತ್ತದೆ; ಬರಿಯ ಪದಗಳನ್ನಷ್ಟೇ ಉಲಿದು ತೋರಿಸುವಾಗ ಅವರು ಈ ಬರಿಗೆಗಳನ್ನು ಸರಿಯಾಗಿಯೇ ಉಲಿಯುತ್ತಾರೆ; ಆದರೆ, ಮಾತಿನಲ್ಲಿ ಇಂತಹ ಪದಗಳು ಸೇರಿಕೊಂಡಿವೆಯಾದರೆ, ಅವರ ಉಲಿಪಿನಲ್ಲಿ ಮೇಲಿನ ವ್ಯತ್ಯಾಸಗಳು ಕಾಣಿಸುವುದೇ ಇಲ್ಲ.

ಇದಕ್ಕೆ ಕಾರಣವೇನೆಂದರೆ, ಶ-ಷಗಳ ನಡುವೆ, ಇಲ್ಲವೇ ಮಹಾಪ್ರಾಣ-ಅಲ್ಪಪ್ರಾಣಗಳ ನಡುವೆ ಕನ್ನಡಿಗರ ಮಾತಿನಲ್ಲಿ ಯಾವ ವ್ಯತ್ಯಾಸವೂ ಇಲ್ಲ; ಯಾರಾದರೂ ಒಬ್ಬರು ಆ ರೀತಿ ವ್ಯತ್ಯಾಸ ಕಾಣಿಸಿಕೊಳ್ಳುವ ಹಾಗೆ ಮಾತನಾಡಿದರೆ, ಕೇಳುವವರಿಗೆ ಅದು ತುಂಬಾ ವಿಚಿತ್ರವಾಗಿ ಕೇಳಿಸುತ್ತದೆ.

ಇದಲ್ಲದೆ, ಮಾತಿನಲ್ಲಿಲ್ಲದ ಈ ವ್ಯತ್ಯಾಸವನ್ನು ಓದಿನಲ್ಲಿ ತರುವುದು ಅಶ್ಟೊಂದು ಸುಲಬದ ಕೆಲಸವೇನಲ್ಲ. ಮಕ್ಕಳ ಜೀವನದಲ್ಲಿ ಮುಂದೆ ಯಾವ ರೀತಿಯ ನೆರವಿಗೂ ಬಾರದ ಇಂತಹ ಕಲಿಕೆಗಾಗಿ ಅವರ ಸಮಯವನ್ನು ಹಾಳುಮಾಡುವ ಬದಲು, ಅದನ್ನು ಬೇರೆ ಬಗೆಯ ಕಲಿಕೆಗೆ ಬಳಸಿಕೊಳ್ಳುವುದೇ ಒಳ್ಳೆಯದು.

### ೪.೮ ಎರಡು ಸಾವಿರ ವರ್ಶಗಳ ಪರಂಪರೆ

ಸುಮಾರು ಎರಡು ಸಾವಿರ ವರ್ಶಗಳಿಂದಲೂ ಇಂತಹ ಸಂಸ್ಕ್ರುತದ ಎರವಲುಗಳನ್ನು ಸಂಸ್ಕ್ರುತದಲ್ಲಿರುವ ಹಾಗೆಯೇ ಕನ್ನಡದಲ್ಲಿ ಬರೆಯಲಾಗುತ್ತಿದೆ; ಅದನ್ನು ಯಾಕೆ ಈಗ ಬದಲಾಯಿಸಲು ಹೊರಡಬೇಕು ಎಂಬ ಕೇಳ್ವಿ ಕೆಲವರಿಂದ ಮೂಡಿಬಂದಿದೆ.

ಅದನ್ನು ಇವತ್ತು ಬದಲಾಯಿಸಬೇಕಾಗಿರುವುದಕ್ಕೆ ಒಂದು ತುಂಬಾ ಮುಕ್ಯವಾದ ಕಾರಣವಿದೆ; ಅದೇನೆಂದರೆ, ಕಳೆದ ಎರಡು ಸಾವಿರ ವರ್ಶಗಳಲ್ಲೂ ಕೆಲವೇ ಕೆಲವು ಮಂದಿ ಮೇಲ್ವರ್ಗದ ಮಕ್ಕಳು ಮಾತ್ರ ಬರಹವನ್ನು ಕಲಿಯುತ್ತಿದ್ದರು; ಇವರೆಲ್ಲ ಸಂಸ್ಕ್ರುತವನ್ನೂ ಕಲಿಯುತ್ತಿದ್ದುದರಿಂದ ಆ ರೀತಿ ಬರೆಯುವುದು ಅವರಿಗೆ ಒಂದು ತೊಡಕೆಂದು ಅನಿಸಿಲ್ಲ.

ಆದರೆ, ಇವತ್ತು ಎಲ್ಲಾ ವರ್ಗದ ಮಕ್ಕಳೂ ಕನ್ನಡ ಬರಹವನ್ನು ಕಲಿಯಬೇಕಾಗಿದೆ; ಅವರಲ್ಲಿ ಕೆಲವೇ ಕೆಲವು ಮಂದಿ ಮಾತ್ರ ಸಂಸ್ಕ್ರುತವನ್ನೂ ಕಲಿಯಲು ಹೊರಡುತ್ತಾರೆ; ಇದೂ ಕೂಡ ಮುಕ್ಯವಾಗಿ ತರಗತಿಯಲ್ಲಿ ಸಂಸ್ಕ್ರುತ ತೆಗೆದುಕೊಂಡರೆ ಸುಲಬವಾಗಿ ಹೆಚ್ಚು ಮಾರ್ಕು ದೊರೆಯುತ್ತದೆ ಎಂಬ ಕಾರಣಕ್ಕಾಗಿ! ಹಾಗಾಗಿ, ಎಲ್ಲರಿಗೂ ಕನ್ನಡ ಬರಹವನ್ನು ಕಲಿಯಲು ಸುಲಬವಾಗುವ ಹಾಗೆ ಮಾಡಲು, ಮೇಲಿನ ಮಾರ್ಪಾಡನ್ನು ನಾವು ಇವತ್ತು ನಡೆಸಲೇಬೇಕಾಗಿದೆ.

## ೪.೯ ಸಂಸ್ಕ್ರುತಕ್ಕೆ ಹಿಂದಿದ್ದ ಹಿರಿಮೆ ಇಂದಿಲ್ಲ

ಹಿಂದಿನ ಕಾಲದಲ್ಲಿ ಬಾರತದಲ್ಲೆಲ್ಲ ಮುಕ್ಯವಾಗಿ ಸಂಸ್ಕ್ರುತವೇ ತಿಳಿವಿನ ಒಯ್ಯುಗೆ(ಮಾದ್ಯಮ)ಯಾಗಿ ಬಳಕೆಯಾಗುತ್ತಿತ್ತು; ಬೇರೆ ಬೇರೆ ನುಡಿಗಳನ್ನಾಡುತ್ತಿದ್ದ ತಿಳಿವಿಗರು ತಾವು ಕಂಡುಕೊಂಡಿದ್ದ ಹೊಸ ಹೊಸ ತಿಳಿವುಗಳನ್ನು ಬೇರೆ ತಿಳಿವಿಗರಿಗೆ ತಿಳಿಸುವುದಕ್ಕಾಗಿ ಸಂಸ್ಕ್ರುತ ಬರಹವನ್ನೇ ಬಳಸುತ್ತಿದ್ದರು. ಹಾಗಾಗಿ, ಸಂಸ್ಕ್ರುತವನ್ನು ಕಲಿಯುವುದು ತಿಳಿವಿಗರೆನ್ನಿಸಿಕೊಳ್ಳಲು ಮತ್ತು ಸಮಾಜದಲ್ಲಿ ಮುಂದೆ ಬರಲು ತುಂಬಾ ಅವಶ್ಯವಾಗಿತ್ತು.

ಆದರೆ, ಇವತ್ತು ಸಂಸ್ಕ್ರುತ ಆ ರೀತಿ ಹೊಸ ಹೊಸ ತಿಳಿವುಗಳ ಒಯ್ಯುಗೆಯಾಗಿ ಉಳಿದಿಲ್ಲ; ಹಿಂದಿ, ಮರಾಟಿ, ಬಂಗ್ಲಾ, ಕನ್ನಡ, ತೆಲುಗು ಮೊದಲಾದ ಇವತ್ತಿನ ನುಡಿಗಳೇ ಆ ಜಾಗವನ್ನು ಆಕ್ರಮಿಸಿಕೊಂಡಿವೆ. ಹಾಗಾಗಿ, ಇವತ್ತು ತಾವು ಕಂಡುಕೊಂಡಿರುವ ಹೊಸ ತಿಳಿವುಗಳನ್ನು ಸಂಸ್ಕ್ರುತದಲ್ಲಿ ಬರೆಯುವವರು ಯಾರೂ ಇಲ್ಲ.

ಈ ಕಾರಣಕ್ಕಾಗಿ, ಇವತ್ತು ತಿಳಿವಿಗರೆನ್ನಿಸಿಕೊಳ್ಳಲು ಸಂಸ್ಕ್ರುತವನ್ನು ಕಲಿತೇ ತೀರಬೇಕೆಂಬ ಒತ್ತಾಸೆಯಿಲ್ಲ; ಹಿಂದಿನ

ಕಾಲದವರು ಕೂಡಿಟ್ಟಿದ್ದ ತಿಳಿವುಗಳನ್ನು ಪಡೆಯಬೇಕೆಂದು ಇರುವವರು ಮಾತ್ರ ಇವತ್ತು ಆ ಬರಹವನ್ನು ಕಲಿಯಬೇಕಾಗುತ್ತದೆ; ಆದರೆ, ಅಂತಹ ತಿಳಿವುಗಳಲ್ಲೂ ಹಲವನ್ನು ಕನ್ನಡ, ಮರಾಟಿ, ಇಂಗ್ಲಿಶ್ ಮೊದಲಾದ ಇವತ್ತಿನ ಬರಹಗಳಲ್ಲಿ ಕೂಡಿಡಲಾಗುತ್ತಿದೆಯಾದ ಕಾರಣ, ಅವುಗಳ ಮೂಲಕವೂ ಆ ತಿಳಿವುಗಳನ್ನು ಪಡೆಯಲು ಬರುತ್ತದೆ.

ಹೀಗಿದ್ದರೂ, ಹಿಂದಿದ್ದ ಸಂಸ್ಕ್ರುತದ ಹಿರಿಮೆಯನ್ನು ಇವತ್ತಿಗೂ ಉಳಿಸಿಕೊಳ್ಳಬೇಕೆಂಬ ತುಡಿತ ಕೆಲವರಲ್ಲಿದೆ, ಮತ್ತು ಇದಕ್ಕಾಗಿ ಅವರು ಬೇರೆ ಹಲವಾರು ವಿಶಯಗಳನ್ನು ಕಲ್ಪಿಸಿಕೊಂಡು ಜನರನ್ನು ದಾರಿತಪ್ಪಿಸುತ್ತಿದ್ದಾರೆ. ಸಂಸ್ಕ್ರುತ ದೇವರ ನುಡಿ, ಎಲ್ಲಾ ನುಡಿಗಳಿಗೂ ಅದು ತಾಯಿನುಡಿ, ಅದನ್ನು ಕಲಿತಲ್ಲಿ ಬೇರೆ ನುಡಿಗಳನ್ನು ಕಲಿಯುವ ಕೆಲಸ ಸುಲಬವಾಗುತ್ತದೆ, ಅದರ ಪದಗಳನ್ನು ಸರಿಯಾಗಿ ಉಲಿಯಲು ಮತ್ತು ಬರೆಯಲು ಬಾರದಿದ್ದರೆ ಅದು ಒಬ್ಬ ವ್ಯಕ್ತಿಯ ಕೀಳ್ತನವನ್ನು ಮತ್ತು ಅಜ್ನಾನವನ್ನು ಸೂಚಿಸುತ್ತದೆ ಎಂಬಂತಹ ಹಲವು ತಪ್ಪು ಅನಿಸಿಕೆಗಳನ್ನು ಅವರು ಜನರಲ್ಲಿ ಬಿತ್ತುತ್ತಿದ್ದಾರೆ.

ಇದರಿಂದಾಗಿ, ಕನ್ನಡ ಬರಹದಲ್ಲಿ ಸಂಸ್ಕ್ರುತ ಎರವಲುಗಳನ್ನು ಬರೆಯುವಾಗ ಅವನ್ನು ಓದುವ ಹಾಗೆ ಬರೆದರೆ ಸಾಕು, ಸಂಸ್ಕ್ರುತದಲ್ಲಿರುವ ಹಾಗೆ ಬರೆಯ ಬೇಕಾಗಿಲ್ಲ ಎಂಬ ನನ್ನ ಮಾತು ಕೆಲವು ಮಂದಿ ಕನ್ನಡಿಗರಿಗೆ ಒಪ್ಪಿಗೆಯಾಗುವುದಿಲ್ಲ. ಸಂಸ್ಕ್ರುತ ಪದಗಳನ್ನು ಆ ರೀತಿ ಮಾರ್ಪಡಿಸುವುದೆಂದರೆ ಎಂತಹದೋ ಒಂದು ದೊಡ್ಡ ತಪ್ಪನ್ನು (ಇಲ್ಲವೇ ಪಾಪವನ್ನು) ಎಸಗುವಂತೆ ಎಂಬುದಾಗಿ ಅವರಿಗೆ ಅನಿಸುತ್ತದೆ.

ನಿಜಕ್ಕೂ ಸಂಸ್ಕ್ರುತ ಬರಹದಲ್ಲಿ ಅಂತಹ ಅದ್ಬುತವಾದುದೇನೂ ಇಲ್ಲ. ಬೇರೆಲ್ಲಾ ಬರಹಗಳ ಹಾಗೆ ಅದೂ ಒಂದು

ಬರಹ ಮಾತ್ರ. ನಮ್ಮ ದೇಶದಲ್ಲಿ ಅದು ಕೆಲವು ಶತಮಾನಗಳಶ್ಟು ಸಮಯ ತಿಳಿವಿನ ಒಯ್ಯುಗೆಯಾಗಿ ಬಳಕೆಯಲ್ಲಿ ಉಳಿಯಲು ಕಾರಣಗಳು ಬೇರೆಯೇ ಇವೆ. ಆ ಬರಹದ ಪರಿಚೆಗಳು ಯಾವುವೂ ಇದಕ್ಕೆ ಕಾರಣವಲ್ಲ.

ಇವತ್ತು ಇಡೀ ಜಗತ್ತಿನಲ್ಲಿ ತಿಳಿವಿನ ಒಯ್ಯುಗೆಯಾಗಿ ಇಂಗ್ಲಿಶ್ ಬರಹ ಬಳಕೆಗೆ ಬಂದಿದೆ; ಆದರೆ, ಇದಕ್ಕೂ ಆ ಬರಹದ ಪರಿಚೆಗಳು ಯಾವುವೂ ಕಾರಣವಲ್ಲ. ನಿಜಕ್ಕೂ ಸ್ಪೆಲ್ಲಿಂಗ್‌ನ ಮಟ್ಟಿಗೆ ಅದು ತುಂಬಾ ತೊಡಕು ತೊಡಕಾದ ಬರಹ; ಹಾಗಿದ್ದರೂ ಅದು ಇವತ್ತು ಜಗತ್ತಿನ ಬರಹವಾಗಿದೆ.

ಹೀಗಾಗಿರುವುದಕ್ಕೆ ಇಂಗ್ಲಿಶ್ ಬರಹವನ್ನು ಬಳಸುತ್ತಿದ್ದವರು ಜಗತ್ತಿನ ಹಲವು ದೇಶಗಳನ್ನು ತಮ್ಮ ಆಳ್ವಿಕೆಗೊಳಪಡಿಸಿದುದು, ಮತ್ತು ತಿಳಿವಿನ ಪ್ರಮಾಣವನ್ನು ಹೆಚ್ಚಿಸುವಲ್ಲಿ ಹಾಗೂ ಕೂಡುಬಲೆಯಲ್ಲಿ ಅವು ಸಂಗ್ರಹಗೊಳ್ಳುವಂತೆ ಮಾಡುವಲ್ಲಿ ಅವರು ಮುಂಚೂಣಿಯಲ್ಲಿದ್ದುದು ಮುಕ್ಯವಾದ ಕಾರಣವಿರಬೇಕು.

ತುಂಬಾ ತೊಡಕು ತೊಡಕಾಗಿರುವ ಚಯ್ನೀಸ್ ಬರಹವೂ ಜಪಾನ್, ಕೊರಿಯಾ, ವಿಯಟ್ನಾಮ್ ಮೊದಲಾದ ಹಲವು ನಾಡುಗಳಲ್ಲಿ ಇಂತಹದೊಂದು ತಿಳಿವಿನ ಒಯ್ಯುಗೆಯಾಗಿ ಬಳಕೆಯಲ್ಲಿತ್ತು.

ಹಾಗಾಗಿ, ಯಾವುದೇ ಒಂದು ನುಡಿಯ ಬರಹವೂ ಬೇರೆ ಬೇರೆ ಕಾರಣಗಳಿಂದಾಗಿ ಹಲವು ನುಡಿಗಳನ್ನು ಬಳಸುವ ಜನರಿಗೆ ತಿಳಿವಿನ ಒಯ್ಯುಗೆಯಾಗಿ ಬಳಕೆಗೆ ಬರಲು ಸಾದ್ಯವಿದೆ; ಹಾಗಾದುದಕ್ಕಾಗಿ ಆ ಬರಹವನ್ನೇ ಒಂದು ಅದ್ಬುತವಾದ ಬರಹವೆಂಬುದಾಗಿ ಕೊಂಡಾಡುವ ಅವಶ್ಯಕತೆಯಿಲ್ಲ, ಮತ್ತು ಅದರ ಪದಗಳನ್ನು ಇನ್ನೊಂದು ನುಡಿಯ ಬರಹದಲ್ಲಿ ಎರವಲಾಗಿ

ಪಡೆದು ಬಳಸುವಾಗ ಅವುಗಳಲ್ಲಿ ಮಾರ್ಪಾಡುಗಳನ್ನು ನಡೆಸುವುದು ಒಂದು ದೊಡ್ಡ ಅಪರಾದ ಎಂಬುದಾಗಿ ತಿಳಿಯಬೇಕಾಗಿಲ್ಲ.

## ೪.೧೦ ಬರಹ ಮತ್ತು ಸಂಸ್ಕ್ರುತಿ

ಸಂಸ್ಕ್ರುತ ಪದಗಳನ್ನು ಸಂಸ್ಕ್ರುತ ಬರಹಗಳಲ್ಲಿ ಇರುವ ಹಾಗೆಯೇ ಕನ್ನಡ ಬರಹಗಳಲ್ಲೂ ಉಳಿಸಿಕೊಳ್ಳದಿದ್ದರೆ ನಮ್ಮ ಸಂಸ್ಕ್ರುತಿಯೇ ನಶ್ಟವಾಗಿ ಹೋಗುತ್ತದೆಯೆಂಬುದಾಗಿ ಋಕಾರದ ವಿಶಯದಲ್ಲಿ ನಡೆದ ಒಂದು ಚರ್ಚೆಯ ಸಮಯದಲ್ಲಿ ಕೆಲವರು ಕನ್ನಡ ಪಂಡಿತರು ಹೆದರಿಕೆಯನ್ನು ಹುಟ್ಟಿಸಿದ್ದರು. ಇಂತಹ ಆದಾರವಿಲ್ಲದ ಹೆದರಿಕೆಯೇ ಕನ್ನಡ ಬರಹದ ಮಟ್ಟಿಗೆ ಅನವಶ್ಯಕವಾಗಿರುವ ಮೇಲಿನ ಕಟ್ಟಲೆಯನ್ನು ಇಲ್ಲವಾಗಿಸಲು ನಮಗೆ ಸಾದ್ಯವಾಗದಿರುವುದಕ್ಕೆ ಇನ್ನೊಂದು ಕಾರಣ.

ಪದಗಳ ಉಲಿಪು ಇಲ್ಲವೇ ಬರವಣಿಗೆ ಮತ್ತು ಸಂಸ್ಕ್ರುತಿಗಳ ನಡುವೆ ಯಾವ ಸಂಬಂದವೂ ಇಲ್ಲ. ಮೇಲೆ ತಿಳಿಸಿದ ಹಾಗೆ, ಪದಗಳ ಉಲಿಪು ಬದಲಾಗುತ್ತಾ ಹೋಗುವುದು ನುಡಿಯೊಂದರ ಜೀವಂತಿಕೆಯನ್ನು ಸೂಚಿಸುತ್ತದೆ. ಎರಡು ಸಾವಿರ ವರ್ಶಗಳಶ್ಟು ಹಿಂದೆ ಪದಗಳ ಉಲಿಪು ಮತ್ತು ಬರವಣಿಗೆ ಸಂಸ್ಕ್ರುತದಲ್ಲಿ ಹೇಗಿತ್ತೋ ಹಾಗೆಯೇ ಇವತ್ತೂ ಅದನ್ನು ಉಳಿಸಿಕೊಳ್ಳಬೇಕೆಂದು ಬಯಸುವುದು ಜೀವಂತಿಕೆಯ ಲಕ್ಶಣವಲ್ಲ.

ಇದಲ್ಲದೆ, ನುಡಿಯಲ್ಲಿ ಬರಹಕ್ಕಿಂತಲೂ ಮಾತಿಗೆ ಹೆಚ್ಚಿನ ಮಹತ್ವವಿದೆ. ಸಾಮಾನ್ಯವಾಗಿ, ಮಾತನ್ನನುಸರಿಸಿ ಬರಹ ಬದಲಾಗುತ್ತಾ ಹೋಗುತ್ತದೆ. ಹೀಗೆ ಮಾತನ್ನನುಸರಿಸಿ ಬದಲಾಗದೆ ಉಳಿದಾಗಲೆಲ್ಲ ಬರಹ ಜನಸಾಮಾನ್ಯರಿಂದ

ದೂರವಾಗುತ್ತದೆ. ಸಂಸ್ಕೃತ ನುಡಿ ಈ ರೀತಿ ಜನ ಸಾಮಾನ್ಯರಿಂದ ದೂರವಾಗಿರುವುದನ್ನು ಗಮನಿಸಿ ಜೈನರು ಪ್ರಾಕ್ರುತವನ್ನು ಮತ್ತು ಬೌದ್ದರು ಪಾಲಿಯನ್ನು ತಮ್ಮ ಮತಪ್ರಚಾರಕ್ಕಾಗಿ ಬಳಸ ಹೊರಟರು.

ಕನ್ನಡದಲ್ಲೂ ಜನರಾಡುವ ಕನ್ನಡ ನುಡಿ ಹಳೆಗನ್ನಡದಿಂದ ತುಂಬಾ ದೂರವಾಗಿರುವುದನ್ನು ಗಮನಿಸಿ, ವಚನಕಾರರು ಮತ್ತು ದಾಸರು ನಡುಗನ್ನಡವನ್ನು ಬಳಸತೊಡಗಿದರು, ಮತ್ತು ಮಯ್ಸೂರಿನ ಬರಹಗಾರರು ಹೊಸಗನ್ನಡವನ್ನು ಬಳಸ ತೊಡಗಿದರು.

ಬದಲಾಗದೆ ಉಳಿಯುವುದರ ಮೂಲಕ ಒಂದು ನುಡಿ ಎಂತಹ ಸಂಸ್ಕ್ರುತಿಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತದೆಯೋ ಅದು ಆ ಸಮಾಜದ ಸಂಸ್ಕ್ರುತಿಯಾಗಲಾರದೆಂಬುದು ಇದರಿಂದ ಗೊತ್ತಾಗುತ್ತದೆ.

ಹಳೆಗನ್ನಡದ ನೂರಾರು ಪದಗಳಲ್ಲಿ ಕಾಣಿಸುತ್ತಿದ್ದ ರ-ಱ ಮತ್ತು ೞ-ಳಗಳ ನಡುವಿನ ವ್ಯತ್ಯಾಸವನ್ನು ನಾವು ಇವತ್ತು ನಮ್ಮ ಹೊಸಗನ್ನಡ ಬರಹಗಳಲ್ಲಿ ತೋರಿಸುವುದಿಲ್ಲ. ಕನ್ನಡ ನುಡಿ ಬದಲಾಗಿರುವುದನ್ನು ಗಮನಿಸಿ, ಕನ್ನಡ ಬರಹಗಾರರು ತಮ್ಮ ಬರಹವನ್ನೂ ಬದಲಾಯಿಸಿಕೊಂಡುದೇ ಇದಕ್ಕೆ ಕಾರಣ. ಹೀಗೆ ಬದಲಾಯಿಸುವ ಮೂಲಕ ಅವರು ಕನ್ನಡ ಬರಹ ಜೀವಂತವಾಗಿ ಉಳಿಯುವಂತೆ ಮಾಡಿದ್ದಾರಲ್ಲದೆ ಕನ್ನಡದ ಸಂಸ್ಕ್ರುತಿಯನ್ನು ನಾಶಮಾಡಿಲ್ಲ.

ಸಂಸ್ಕ್ರುತದಿಂದ ಎರವಲಾಗಿ ಪಡೆದ ಪದಗಳನ್ನು ನಮ್ಮ ಉಲಿಪಿಗೆ ಹೊಂದಿಕೊಳ್ಳುವ ಹಾಗೆ ಬದಲಾಯಿಸಿಕೊಳ್ಳುವುದರಿಂದ

ಸಂಸ್ಕ್ರುತಿ ನಾಶವಾಗುವುದಿಲ್ಲ ಎಂಬುದಕ್ಕೆ ಕನ್ನಡದ ಚರಿತ್ರೆಯಿಂದಲೇನೇ ಹಲವು ಎತ್ತುಗೆಗಳನ್ನು ಕೊಡ‌ಬಹುದು.

ಹಳೆಗನ್ನಡ ಕಾವ್ಯಗಳಲ್ಲಿ ನೂರಾರು ಸಂಸ್ಕ್ರುತ ಪದಗಳನ್ನು ತದ್ಬವಗಳನ್ನಾಗಿ ಬದಲಾಯಿಸಿ ಬಳಸಲಾಗಿದೆ (ಇಲ್ಲವೇ ಹಾಗೆ ಬದಲಾಯಿಸಿದ ಪ್ರಾಕ್ರುತದಿಂದ ಅವನ್ನು ಎರವಲಾಗಿ ಪಡೆಯಲಾಗಿದೆ). ಇವುಗಳಲ್ಲಿ ಕಾಣಿಸುವ ಬದಲಾವಣೆಗಳೆಲ್ಲವೂ ಸಂಸ್ಕ್ರುತ ಪದಗಳ ಬಳಕೆಯಿಂದ ಕನ್ನಡ ನುಡಿಯ ಸೊಗಡು ನಾಶವಾಗದ ಹಾಗೆ ಅದನ್ನು ಉಳಿಸಿಕೊಳ್ಳಲು ಮಾಡಿದ ಪ್ರಯತ್ನಗಳಾಗಿವೆ.

ಎತ್ತುಗೆಗೆ, ಸಂಸ್ಕ್ರುತದ ಸ, ಶ, ಷಗಳಿಗೆ ಬದಲಾಗಿ ಹಳೆಗನ್ನಡದಲ್ಲಿ ಸಕಾರ ಮಾತ್ರ ಇತ್ತು. ಹಾಗಾಗಿ ಸಂಸ್ಕ್ರುತ (ತತ್ಸಮ) ಪದಗಳಲ್ಲಿ ಬರುವ ಶಕಾರ ಮತ್ತು ಷಕಾರಗಳನ್ನು ತದ್ಬವ ಪದಗಳಲ್ಲಿ ಸಕಾರವಾಗಿ ಬದಲಾಯಿಸಲಾಗಿತ್ತು.

| ತತ್ಸಮ | ತದ್ಬವ | ತತ್ಸಮ | ತದ್ಬವ |
|---|---|---|---|
| ಅಂಕುಶ | ಅಂಕುಸ | ಆಮಿಷ | ಆಮಿಸ |
| ನಿಶ್ಶಂಕ | ನಿಸ್ಸಂಕ | ದೋಷ | ದೋಸ |
| ಪಶು | ಪಸು | ನಿಮಿಷ | ನಿಮಿಸ |
| ಶರ್ಕರ | ಸಕ್ಕರೆ | ಶೇಷ | ಸೇಸ |
| ಆಕಾಶ | ಆಗಸ | ಭಾಷೆ | ಬಾಸೆ |

ಹಳೆಗನ್ನಡದಲ್ಲಿ ಮಹಾಪ್ರಾಣ ಬರಿಗೆಗಳಿರಲಿಲ್ಲ. ಹಾಗಾಗಿ, ಸಂಸ್ಕ್ರುತ ಪದಗಳಲ್ಲಿ ಕಾಣಿಸುವ ಮಹಾಪ್ರಾಣ ಬರಿಗೆಗಳನ್ನು ಇಂತಹ ಹಲವು ಪದಗಳಲ್ಲಿ ಅಲ್ಪಪ್ರಾಣ ಬರಿಗೆಗಳನ್ನಾಗಿ ಬದಲಾಯಿಸಲಾಗಿತ್ತು.

| ತತ್ಸಮ | ತದ್ಭವ | ತತ್ಸಮ | ತದ್ಭವ |
|---|---|---|---|
| ಶೃಂಖಲೆ | ಸಂಕಲೆ | ಭಕ್ತಿ | ಬಕ್ತಿ |
| ಸಂಘ | ಸಂಗ | ಕಫ | ಕಪ |
| ಭಾನ್ದಸ | ಬಾನ್ದಸ | ಧಾರೆ | ದಾರೆ |
| ಶುಣ್ಠಿ | ಸುಂಟಿ | ಕಥೆ | ಕತೆ |
| ಮಠ | ಮಟ | ಢಕ್ಕೆ | ಡಕ್ಕೆ |

ಹಳೆಗನ್ನಡದಲ್ಲಿ ಋಕಾರವಿರಲಿಲ್ಲ; ಹಾಗಾಗಿ, ಸಂಸ್ಕೃತ ಪದಗಳಲ್ಲಿದ್ದ ಋಕಾರವನ್ನು ರಿ ಎಂಬುದಾಗಿ ಬದಲಾಯಿಸಲಾಗಿತ್ತು:

| ತತ್ಸಮ | ತದ್ಭವ | ತತ್ಸಮ | ತದ್ಭವ |
|---|---|---|---|
| ಋಷಿ | ರಿಸಿ | ತೃಣ | ತಿಣ |
| ಋತು | ರಿತು | ವೃತ್ತಿ | ವಿತ್ತಿ |
| ಋಣ | ರಿಣ | ಸೃಷ್ಟಿ | ಸಿಟ್ಟಿ |
| ಋಜು | ರಿಜು | ವೃದ್ಧಿ | ವಿದ್ದಿ |

ಹಳೆಗನ್ನಡದಲ್ಲಿಲ್ಲದಿದ್ದ ಹಲವು ಬಗೆಯ ಒತ್ತುಬರಿಗೆಗಳು ಸಂಸ್ಕೃತದಲ್ಲಿವೆ. ಇವುಗಳಲ್ಲಿ ಕೆಲವು ಪದಗಳ ಮೊದಲಿಗೂ ಬರಬಲ್ಲುವು.

ಇಂತಹ ಕಡೆಗಳಲ್ಲಿ ಬೇರೆ ಬೇರೆ ಬಗೆಯ ಬದಲಾವಣೆಗಳ ಮೂಲಕ ಈ ಪದಗಳು ಹಳೆಗನ್ನಡ ಪದಸ್ವರೂಪಕ್ಕೆ ಹೊಂದಿಕೊಳ್ಳುವಂತೆ ಮಾಡಲಾಗಿತ್ತು:

| ತತ್ಸಮ | ತದ್ಬವ | ತತ್ಸಮ | ತದ್ಬವ |
|---|---|---|---|
| ರಾಕ್ಷಸ | ರಕ್ಕಸ | ಕ್ಷೀರ | ಕೀರ |
| ಸಂಸ್ಕ್ರುತ | ಸಕ್ಕದ | ಜ್ವರ | ಜರ |
| ಅಗ್ನಿ | ಅಗ್ಗಿ | ಧ್ವನಿ | ದನಿ |
| ಅಧ್ಯಕ್ಷ | ಅದ್ದಿಕ | ಸ್ಥಾನ | ತಾಣ |

ಸಂಸ್ಕ್ರುತ ಪದಗಳನ್ನು ಬದಲಾಯಿಸಿಕೊಳ್ಳದೆ ಹಾಗೆಯೇ ಬಳಸುವುದರಿಂದ ಕನ್ನಡದ ಸೊಗಡು (ಸಂಸ್ಕ್ರುತಿ) ನಾಶವಾಗುತ್ತದೆಯೆಂಬುದನ್ನು ಕಂಡುಕೊಂಡ ಹದಿಮೂರನೇ ಶತಮಾನದ ಕವಿ ಆಂಡಯ್ಯನು ತನ್ನ ಕಬ್ಬಿಗರ ಕಾವದಲ್ಲಿ ತತ್ಸಮ ಪದಗಳ ಬದಲು ಎಲ್ಲೆಡೆಗಳಲ್ಲೂ ಇಂತಹ ತದ್ಬವ ಪದಗಳನ್ನೇ ಬಳಸುವ ಪ್ರಯತ್ನ ನಡೆಸಿದ್ದ.

ಇಂತಹ ಪ್ರಯತ್ನಗಳೆಲ್ಲ ಕನ್ನಡದ ಸೊಗಡನ್ನು ಎಂದರೆ ಕನ್ನಡದ್ದೇ ಆದ ಸಂಸ್ಕ್ರುತಿಯನ್ನು ಉಳಿಸುವ ಪ್ರಯತ್ನಗಳಲ್ಲದೆ ಅಳಿಸಿಹಾಕುವ ಪ್ರಯತ್ನಗಳಲ್ಲ.

ಆದರೆ, ಇವತ್ತಿನ ಕನ್ನಡ ಬರಹಗಳಲ್ಲಿ ಇಂತಹ ಕನ್ನಡದ ಸೊಗಡನ್ನು (ಸಂಸ್ಕ್ರುತಿಯನ್ನು) ಉಳಿಸಿಕೊಳ್ಳುವ ತದ್ಬವ ಪದಗಳಲ್ಲಿ ಪಕ್ಷಿ–ಹಕ್ಕಿ, ಪಿಷ್ಟ–ಹಿಟ್ಟು, ಕಥೆ–ಕತೆ, ಶರ್ಕರ–ಸಕ್ಕರೆ, ವೀಥಿ–ಬೀದಿ ಮೊದಲಾದ ಕೆಲವೇ ಕೆಲವು ಪದಗಳನ್ನು ಮಾತ್ರ ಉಳಿಸಿಕೊಳ್ಳಲಾಗಿದೆ. ಉಳಿದೆಡೆಗಳಲ್ಲೆಲ್ಲ ಅವುಗಳ ಬದಲು ಜ್ವರ, ಸ್ಥಾನ, ಋಷಿ, ಋತು, ದೋಷ, ಧಾರೆ, ಅಗ್ನಿ ಮೊದಲಾದ ತತ್ಸಮ ಪದಗಳನ್ನೇ ಬಳಸಲಾಗುತ್ತಿದೆ. ಕನ್ನಡದ ಪದಸ್ವರೂಪಕ್ಕೆ ಹೊಂದಿಕೆಯಾಗುವ ಮತ್ತು ಕನ್ನಡಿಗರಿಗೆ ಕಲಿಯಲು ಮತ್ತು ಬಳಸಲು ಸುಲಬವಾಗುವ ತದ್ಬವ ಪದಗಳನ್ನು ಕಯ್ಬಿಡಲಾಗಿದೆ.

ಇದಲ್ಲದೆ, ಸಂಸ್ಕೃತ ಪದಗಳನ್ನು ಹೊಸದಾಗಿ ಎರವಲು ಪಡೆಯುವುದಿದ್ದಲ್ಲಿ, ಹಾಗೆ ಪಡೆದ ಮೇಲೆ ಅವನ್ನು ಸಂಸ್ಕೃತ ಬರಹಗಳಲ್ಲಿರುವ ಹಾಗೆಯೇ ಕನ್ನಡದಲ್ಲೂ ಬರೆಯಬೇಕೆಂಬ ಕಟ್ಟುಪಾಡನ್ನೂ ನಾವು ನಮ್ಮ ಮೇಲೆ ಹೊರಿಸಿಕೊಂಡಿದ್ದೇವೆ. ಅವುಗಳಲ್ಲಿ ಕನ್ನಡ ಪದಸ್ವರೂಪಕ್ಕೆ ಹೊಂದಿಕೊಳ್ಳುವ ಹಾಗೆ ಬದಲಾವಣೆಗಳನ್ನೇನಾದರೂ ಮಾಡಿದಲ್ಲಿ ಅವನ್ನು ತಪ್ಪು ಎಂಬುದಾಗಿ ತಿರಸ್ಕರಿಸಲಾಗುತ್ತದೆ.

ಈ ಕಟ್ಟುಪಾಡಿನಿಂದಾಗಿ ಹಳೆಗನ್ನಡ ಕಾಲದ ಬರಹಗಾರರಿಗಿದ್ದಂತಹ ಸಂಸ್ಕೃತ ಪದಗಳನ್ನು ತದ್ಭವಗಳಾಗಿ ಬದಲಾಯಿಸುವ ಸ್ವಾತಂತ್ರ್ಯವೂ ಇವತ್ತು ನಮಗೆ ಇಲ್ಲವಾಗಿದೆ.

ಇವೆಲ್ಲ ನಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಪ್ರಯತ್ನಗಳಲ್ಲ. ಸಂಸ್ಕೃತದ ಮೇಲೆ ಕುರುಡು ಅಬಿಮಾನವಿರುವ, ಮತ್ತು ಕನ್ನಡದ ಕುರಿತಾಗಿ ಕೀಳರಿಮೆಯಿರುವ ಕನ್ನಡ ಬರಹಗಾರರ ಈ ನಡವಳಿಯಿಂದಾಗಿ ಇವತ್ತು ನಮ್ಮದೇ ಆದ ಕನ್ನಡ ಸಂಸ್ಕೃತಿ ಕನ್ನಡ ಬರಹಗಳಲ್ಲಿ ಇಲ್ಲವಾಗಿದೆ.

# ೫ ಮುಕ್ತಾಯ

## ೫.೧ ಸಾಮಾಜಿಕ ನ್ಯಾಯ

ಒಂದು ಸಮಾಜದಲ್ಲಿ ಓದು-ಬರಹವನ್ನು ಕಲಿಯುವ ಕೆಲಸ ಕೆಲವು ಮಕ್ಕಳಿಗೆ ತುಂಬಾ ಕಶ್ಟ ಮತ್ತು ಬೇರೆ ಕೆಲವು ಮಕ್ಕಳಿಗೆ ಅದಕ್ಕಿಂತ ಸುಲಬ ಎಂದಿದ್ದಲ್ಲಿ ಅದು ಸಾಮಾಜಿಕ ನ್ಯಾಯವೆಂದೆನಿಸುವುದಿಲ್ಲ. ಆದಶ್ಟು ಮಟ್ಟಿಗೆ ಓದು-ಬರಹದ ಕಲಿಕೆ ಎಲ್ಲಾ ಮಕ್ಕಳಿಗೂ ಒಂದೇ ಬಗೆಯಲ್ಲಿ ಕಶ್ಟ ಇಲ್ಲವೇ ಸುಲಬವಾಗಿರಬೇಕು. ಹಾಗಿದ್ದಲ್ಲಿ ಮಾತ್ರ ಓದು-ಬರಹವನ್ನು ಕಲಿತು ಸಮಾಜದಲ್ಲಿ ಮುಂದೆ ಬರಲು ಎಲ್ಲಾ ಮಕ್ಕಳಿಗೂ ಒಂದೇ ಬಗೆಯ ಅನುವು (ಅವಕಾಶ) ದೊರೆತಂತಾಗುತ್ತದೆ.

ಇಂತಹ ಸಾಮಾಜಿಕ ನ್ಯಾಯ ಮಕ್ಕಳಿಗೆ ದೊರಕಬೇಕು ಎಂಬುದಕ್ಕಾಗಿ ಜರ್ಮನಿಯಂತಹ ಕೆಲವು ನಾಡುಗಳಲ್ಲಿ ಬರವಣಿಗೆಯ ಸರಿಪಡಿಕೆಯನ್ನು ಅದು ನೂರಕ್ಕೆ ಎಪ್ಪತ್ತರಶ್ಟು ಜನರಿಗೆ ಬೇಡವಾಗಿದ್ದರೂ ಜಾರಿಗೆ ತರಲಾಗಿದೆ. ಇವತ್ತು ಕನ್ನಡ ಬರವಣಿಗೆಯಲ್ಲಿ ನಾವು ನಡೆಸಬೇಕಾಗಿರುವ ಸರಿಪಡಿಕೆಯೂ ಇಂತಹದೇ.

ಸಂಸ್ಕ್ರುತ ಎರವಲು ಪದಗಳನ್ನು ಸಂಸ್ಕ್ರುತದಲ್ಲಿರುವ ಹಾಗೆಯೇ ಬರೆಯುವ ಕೆಲಸ, ಮತ್ತು ಇದಕ್ಕಾಗಿ ಸುರುವಿನಿಂದಲೂ ಹತ್ತಿಪ್ಪತ್ತು ಹೆಚ್ಚಿನ ಬರಿಗೆಗಳನ್ನು ಕಲಿಯುವ ಕೆಲಸ ಮೇಲ್ವರ್ಗದ ಮಕ್ಕಳಿಗಿಂತಲೂ ಕೆಳವರ್ಗದ ಮಕ್ಕಳಿಗೆ ಹೆಚ್ಚು ಕಶ್ಟವಾಗುತ್ತದೆ.

ಇದರಿಂದಾಗಿ, ಓದು–ಬರಹವನ್ನು ಕಲಿತು ಸಮಾಜದಲ್ಲಿ ಮುಂದೆ ಬರಲು ಮೇಲ್ವರ್ಗದ ಮಕ್ಕಳಿಗೆ ಸಿಗುವಂತಹ ಅನುವು ಕೆಳವರ್ಗದ ಮಕ್ಕಳಿಗೆ ಸಿಗುವುದಿಲ್ಲ. ಅವರು ಈ ಕೆಲಸದಲ್ಲಿ ತುಂಬಾ ಹಿಂದೆ ಬೀಳುತ್ತಿದ್ದಾರೆ.

ಕನ್ನಡದ ಓದು–ಬರಹದ ಕಲಿಕೆಯಲ್ಲಿ ಕಾಣಿಸುವ ಈ ಸಾಮಾಜಿಕ ಅನ್ಯಾಯವನ್ನು ನಾವು ಇವತ್ತು ಆದಶ್ಟು ಮಟ್ಟಿಗೆ ಹೋಗಲಾಡಿಸಬೇಕಾಗಿದೆ. ಸಂಸ್ಕ್ರುತದಿಂದ ಎರವಲಾಗಿ ಪಡೆದ ಪದಗಳನ್ನು ಹೆಚ್ಚುಕಡಿಮೆ ಸಂಸ್ಕ್ರುತದಲ್ಲಿರುವ ಹಾಗೆಯೇ ಬರೆಯಬೇಕೆಂಬ ಕನ್ನಡದ ಮಟ್ಟಿಗೆ ಅನವಶ್ಯಕವಾಗಿರುವ ಕಟ್ಟಲೆಯನ್ನು ಬಿಟ್ಟುಕೊಟ್ಟಲ್ಲಿ ಅಶ್ಟರ ಮಟ್ಟಿಗೆ ಕೆಳವರ್ಗದ ಮಕ್ಕಳಿಗೆ ಸಾಮಾಜಿಕ ನ್ಯಾಯ ಒದಗಿಸಿದಂತಾಗುತ್ತದೆ.

ಓದು–ಬರಹವನ್ನು ಕಲಿತು ಸಮಾಜದಲ್ಲಿ ಮುಂದೆ ಬರುವ ಕೆಲಸದಲ್ಲಿ ಬೇರೆಯೂ ಕೆಲವು ವಿಶಯಗಳಿಂದಾಗಿ ಮೇಲ್ವರ್ಗದ ಮಕ್ಕಳಿಗೆ ಸಿಗುವ ಅನುವು ಕೆಳವರ್ಗದ ಮಕ್ಕಳಿಗೆ ಸಿಗುವುದಿಲ್ಲ.

ಎತ್ತುಗೆಗೆ, ಬರಹದಲ್ಲಿ ಬಳಕೆಯಾಗುವ ಕನ್ನಡ ನುಡಿ ಕೆಳವರ್ಗದ ಮಕ್ಕಳು ಮನೆಯಲ್ಲಿ ಬಳಸುವ ಕನ್ನಡದ ಒಳನುಡಿಗಿಂತಲೂ ಮೇಲ್ವರ್ಗದ ಮಕ್ಕಳು ಬಳಸುವ ಕನ್ನಡದ ಒಳನುಡಿಗೆ ಹೆಚ್ಚು ಹತ್ತಿರವಾಗಿದೆ. ಅದರಲ್ಲಿ ಬಳಕೆಯಾಗುವ ಪದಗಳಲ್ಲಿ ಹೆಚ್ಚಿನವೂ ಮೇಲ್ವರ್ಗದ ಮಕ್ಕಳಿಗೆ ಶಾಲೆಗೆ ಸೇರುವ ಮೊದಲೇ ತಿಳಿದಿರುತ್ತವೆ.

ಅದರ ಸೊಲ್ಲರಿಮೆಯ ಕಟ್ಟಲೆಗಳೂ ಮೇಲ್ವರ್ಗದ ಮಕ್ಕಳ ಒಳನುಡಿಗೆ ಹೆಚ್ಚು ಹತ್ತಿರವಾಗಿವೆ. ಇದರಿಂದಾಗಿಯೂ ಓದು–ಬರಹವನ್ನು ಕಲಿಯುವ ಕೆಲಸ ಕೆಳವರ್ಗದ ಮಕ್ಕಳಿಗಿಂತ ಮೇಲ್ವರ್ಗದ ಮಕ್ಕಳಿಗೆ ಹೆಚ್ಚು ಸುಲಬವಾಗುತ್ತದೆ.

ಮನೆಯಲ್ಲಿ ದಿನಾಲೂ ಓದು-ಬರಹಗಳನ್ನು ನಡೆಸುವ ತಂದೆ, ತಾಯಿ, ಅಣ್ಣ, ಅಕ್ಕ ಮೊದಲಾದವರಿದ್ದರೆ, ಅವರೊಂದಿಗೆ ಒಡನಾಡುತ್ತಾ ಬೆಳೆಯುವ ಮಕ್ಕಳು ಹೆಚ್ಚು ಸುಲಬವಾಗಿ ಓದು-ಬರಹವನ್ನು ಕಲಿಯಬಲ್ಲರು. ಈ ವಿಶಯದಲ್ಲೂ ಮೇಲ್ವರ್ಗದ ಮಕ್ಕಳಿಗಿರುವ ಅನುವು ಕೆಳವರ್ಗದ ಮಕ್ಕಳಿಗಿರುವುದಿಲ್ಲ.

ಆದರೆ, ಇಂತಹ ಕೆಲವು ವಿಶಯಗಳಲ್ಲಿ ಎಲ್ಲಾ ಮಕ್ಕಳಿಗೂ ಓದು-ಬರಹವನ್ನು ಕಲಿಯುವಲ್ಲಿ ಒಂದೇ ಬಗೆಯ ಅನುವು ದೊರಕುವ ಹಾಗೆ ಮಾಡುವುದು ತುಂಬಾ ಕಶ್ಟ. ಆದರೆ, ಕನ್ನಡದ ಬರವಣಿಗೆಯ ವಿಶಯದಲ್ಲಿ ಅಂತಹ ಕಶ್ಟವೇನಿಲ್ಲ.

## ೫.೨ ಕನ್ನಡದ್ದೇ ಆದ ಪದಗಳ ಬಳಕೆ

ಎಲ್ಲಾ ಮಕ್ಕಳಿಗೂ ಓದಲು ಮತ್ತು ಬರೆಯಲು ಕಲಿಯುವಲ್ಲಿ ಒಂದೇ ಬಗೆಯ ಅನುವು ದೊರಕುವ ಹಾಗಾಗಲು ನಾವು ಮಾಡಬಹುದಾದ ಇನ್ನೊಂದು ಮಾರ್ಪಾಡೆಂದರೆ, ಮಕ್ಕಳ ಓದುಗಳಲ್ಲಿ ಹೆಚ್ಚು ಹೆಚ್ಚು ಕನ್ನಡದವೇ ಆದ ಪದಗಳನ್ನು ಬಳಸಬೇಕು. ಎರವಲು ಪದಗಳ ಬಳಕೆಗೆ, ಅದರಲ್ಲೂ ಸಂಸ್ಕ್ರುತ ಎರವಲುಗಳ ಬಳಕೆಗೆ ಒಂದು ಮಿತಿಯಿರಬೇಕು.

ಎರವಲು ಪದಗಳ ಬಳಕೆಯ ಮೇಲೆ ಇಂತಹ ಮಿತಿಯನ್ನು ಹಲವು ನಾಡುಗಳಲ್ಲಿ ಹೇರಲಾಗಿದೆ. ಜಪಾನ್ ಮತ್ತು ಕೊರಿಯಾಗಳಲ್ಲಿ ಯಾವ ಚಯ್ನೀಸ್ ಎರವಲು ಪದಗಳನ್ನು ಬರಹಗಳಲ್ಲಿ ಬಳಸಬಹುದು ಎಂಬುದಕ್ಕೆ ಪಟ್ಟಿಗಳನ್ನು ಮಾಡಲಾಗಿದೆ.

ರಶ್ಯನ್ ನುಡಿಯಲ್ಲಿ ಎರವಲು ಪದಗಳ ಬಳಕೆಯನ್ನು ಒಂದು ಮಿತಿಯಲ್ಲಿರಿಸಿಕೊಳ್ಳಬೇಕೆಂಬ ಚಳವಳಿಗಳು ಹಿಂದಿನಿಂದಲೂ ನಡೆದುಬಂದಿವೆ. ಕೆಲವೊಮ್ಮೆ ಇವು ಬಳಕೆಯಲ್ಲಿರುವ ಎರವಲು

ಪದಗಳಿಗೆ ಬದಲಾಗಿ ತಮ್ಮವೇ ಆದ ಪದಗಳನ್ನು ಬಳಸುವಲ್ಲಿ ವರೆಗೂ ಹೋಗಿವೆ. ಫ್ರೆಂಚ್ ಮತ್ತು ಕ್ರೊಯೇಶಿಯನ್ ನುಡಿಗಳಲ್ಲೂ ಎರವಲು ಪದಗಳನ್ನು ಕಡಿಮೆ ಮಾಡುವ ಹಲವು ಪ್ರಯತ್ನಗಳು ನಡೆದಿವೆ, ಮತ್ತು ನಡೆಯುತ್ತಿವೆ.

ಕನ್ನಡದ ತಿಳಿವಿಗರಿಗೆ ತಮ್ಮದೇ ಆದ ನುಡಿಯ ಮೇಲೆ ಒಂದು ಬಗೆಯ ಕೀಳರಿಮೆ ಇದೆ. ಹಾಗಾಗಿ, ಹೊಸಪದಗಳನ್ನು ಕಟ್ಟಬೇಕಾದಾಗಲೆಲ್ಲ ಅವರು ಸಂಸ್ಕೃತದ ಮೊರೆಹೊಗುತ್ತಿದ್ದಾರೆ. ಇದರಿಂದಾಗಿ, ಹೆಚ್ಚು ಹೆಚ್ಚು ಹೊಸಪದಗಳನ್ನು ಬಳಸಬೇಕಾಗುವ ಬರಹಗಳಲ್ಲಿ ಸಂಸ್ಕೃತ ಎರವಲುಗಳ ಎಣಿಕೆ ಮಿತಿಮೀರುವ ಹಾಗಾಗಿದೆ.

ಇದನ್ನು ಆದಶ್ಟು ಕಡಿಮೆ ಮಾಡಿ, ಹೆಚ್ಚು ಹೆಚ್ಚು ಕನ್ನಡದವೇ ಆದ ಹೊಸಪದಗಳನ್ನು ಕಟ್ಟಿ ಬಳಸಲು ತೊಡಗಿದಲ್ಲಿ, ತಾನಾಗಿಯೇ ಕನ್ನಡ ಬರಹಗಳಲ್ಲಿ ತುಂಬಿಕೊಳ್ಳುವ ಸಂಸ್ಕೃತ ಎರವಲುಗಳ ಎಣಿಕೆ ಕಡಿಮೆಯಾಗಬಲ್ಲುದು.

### ೫.೩ ಕಲಿಯುವ ಒಳ ಒತ್ತಡ

ಬರಹವನ್ನು ಕಲಿಯಲೇಬೇಕೆಂಬ ಒಳ ಒತ್ತಡವಿರುವವರು ಅದು ಎಶ್ಟೇ ತೊಡಕಿನದಾದರೂ ಅದನ್ನು ಕಲಿಯದಿರುವುದಿಲ್ಲ. ಸಾಮಾನ್ಯವಾಗಿ, ಮೇಲ್ವರ್ಗದ ಮಕ್ಕಳಲ್ಲಿ ಅವರ ಹಿರಿಯರು ಅಂತಹ ಒಳ ಒತ್ತಡವನ್ನು ಹುಟ್ಟಿಸಿಬಿಡುತ್ತಾರೆ. ಹಾಗಾಗಿ, ಅವರು ಬರಹದ ಕಲಿಕೆಯಲ್ಲಿ ಹಿಂದೆ ಬೀಳುವುದಿಲ್ಲ.

ಕೆಳವರ್ಗದ ಮಕ್ಕಳಲ್ಲಿ ಕೆಲವರಿಗೆ ಇಂತಹ ತಮ್ಮದೇ ಆದ ಒಳ ಒತ್ತಡವಿರುತ್ತದೆ. ಅವರು ಬರಹದ ತೊಡಕುಗಳೊಂದಿಗೆ ಬಡತನ, ಜಾತೀಯತೆ ಮೊದಲಾದ ಬೇರೆಯೂ ಹಲವು

ತೊಡಕುಗಳಿದ್ದರೂ ಅವನ್ನೆಲ್ಲ ಎದುರಿಸಿ ಬರಹದ ಕಲಿಕೆಯಲ್ಲಿ ಮುಂದೆ ಹೋಗುತ್ತಾರೆ. ಇವರನ್ನು ಹೊರತುಪಡಿಸಿ, ಬೇರೆ ಕೆಳವರ್ಗದ ಮಕ್ಕಳು ಕಲಿಕೆಯಲ್ಲಿ ಹಿಂದೆ ಬೀಳುತ್ತಾರೆ; ಯಾಕೆಂದರೆ, ಅವರಿಗೆ ತಮ್ಮದೇ ಆದ ಒಳ ಒತ್ತಡವಿರುವುದಿಲ್ಲ, ಮತ್ತು ಹೊರಗಿನಿಂದಲೂ ಅಂತಹ ಒತ್ತಡ ಅವರ ಮೇಲೆ ಬೀಳುವುದಿಲ್ಲ.

ಅಂತಹ ಮಕ್ಕಳಿಗಾಗಿ, ಬೇರೆ ತೊಡಕುಗಳನ್ನೆಲ್ಲ ನೀಗಲು ಸಾದ್ಯವಾಗದಿದ್ದರೂ ಮೇಲೆ ವಿವರಿಸಿದಂತಹ ಎರಡು ಬಗೆಯ ಬರಹದ ತೊಡಕುಗಳನ್ನಾದರೂ ನೀಗಿದೆವಾದರೆ, ಅವರಲ್ಲೂ ಇವತ್ತಿಗಿಂತ ಹೆಚ್ಚು ಮಂದಿ ಬರಹವನ್ನು ಕಲಿತುಕೊಳ್ಳಲು ಮುಂದೆ ಬರಬಹುದೆಂದು ನನಗೆ ತೋರುತ್ತದೆ.

ಕನ್ನಡ ಬರಹದಲ್ಲಿ ಈ ಮಾರ‍್ಪಾಡುಗಳನ್ನು ನಡೆಸುವಲ್ಲಿ ಮುಂದಾಳುಗಳಾಗಲು ನನಗಿಂತಲೂ ಕೆಳವರ‍್ಗದಿಂದ ಮುಂದೆ ಬಂದ ಬಂಡಾಯ ಬರಹಗಾರರೇ ಸರಿಯಾದ ವ್ಯಕ್ತಿಗಳು ಎಂಬುದಾಗಿ ನಾನು ನನ್ನ ಕನ್ನಡ ಬರಹವನ್ನು ಸರಿಪಡಿಸೋಣ ಎಂಬ ಪುಸ್ತಕದಲ್ಲಿ ಬರೆದಿದ್ದೆ. ಆದರೆ, ಯಾವ ವರ‍್ಗದಿಂದಲೇ ಬಂದಿರಲಿ, ಒಮ್ಮೆ ಮೇಲೆ ಬಂದ ಮೇಲೆ, ತಮ್ಮ ಮೇಲ್ತನವನ್ನು ಉಳಿಸಿಕೊಳ್ಳುವುದೇ ಹಾಗೆ ಮೇಲೇರಿದವರ ಗುರಿಯಾಗಿರುತ್ತದೆ; ಹಾಗಾಗಿ, ಅಶ್ಟೊಂದು ಕಶ್ಟದಿಂದ ಮೇಲ್ತನವನ್ನು ಪಡೆದಿರುವ ಬಂಡಾಯ ಬರಹಗಾರರು ತಮ್ಮ ಮೇಲ್ತನಕ್ಕೆ ತೊಡಕಾಗಬಲ್ಲುದೆಂದು ತೋರುವ ಈ ಕೆಲಸವನ್ನು ನಡೆಸಲು ಮುಂದಾಗಿಲ್ಲದಿರಬಹುದು.

ಇದು ಏನೇ ಇರಲಿ, ಕನ್ನಡ ಬರಹ ಎಲ್ಲಾ ವರ‍್ಗದವರನ್ನೂ ತಲಪಬೇಕು, ಎಲ್ಲರೂ ಬರಹಕ್ಕೆ ಹೊಂದಿಕೊಳ್ಳುವ ಹೊಸದಾದ ಆಲೋಚನೆಯ ಬಗೆಯನ್ನು ಪಡೆಯಬೇಕು, ಮತ್ತು ಹಾಗೆ

ಪಡೆಯುವ ಮೂಲಕ ಎಲ್ಲಾ ವರ್ಗದವರೂ ಸಮಾಜದಲ್ಲಿ ಮುಂದೆ ಬರಬೇಕು ಮಾತ್ರವಲ್ಲ, ಅವರ ಕೊಡುಗೆಗಳ ಮೂಲಕ ಕನ್ನಡ ಬರಹವೂ ಹೆಚ್ಚು ಹೆಚ್ಚು ಶ್ರೀಮಂತವಾಗಬೇಕು ಎಂಬ ತುಡಿತವಿರುವವರೆಲ್ಲರೂ ಈ ಕೆಲಸದಲ್ಲಿ ಇವತ್ತು ಕಯ್ಜೋಡಿಸ ಬೇಕಾಗಿದೆ.

### ೫.೪ ಮುಕ್ಯವಾದ ಪ್ರಯೋಜನಗಳು

ಈ ರೀತಿ ಎರವಲು ಪದಗಳನ್ನು ಓದುವ ಹಾಗೆಯೇ ಬರೆಯಲು ತೊಡಗುವುದರಿಂದ ನಾವು ಕೆಳವರ್ಗದ ಮಕ್ಕಳಿಗೆ ಸಾಮಾಜಿಕ ನ್ಯಾಯವನ್ನು ಒದಗಿಸುವುದರೊಂದಿಗೆ ಬೇರೆಯೂ ಕೆಲವು ಪ್ರಯೋಜನಗಳನ್ನು ಪಡೆಯಬಲ್ಲೆವು. ಮೇಲೆ ನಾಲ್ಕನೇ ಪಸುಗೆಯಲ್ಲಿ ತಿಳಿಸಿದ ಇಂತಹ ಪ್ರಯೋಜನಗಳಲ್ಲಿ ಮುಕ್ಯವಾದ ಕೆಲವನ್ನು ಕೆಳಗೆ ಇನ್ನೊಮ್ಮೆ ಚುಟುಕಾಗಿ ಪಟ್ಟಿಮಾಡಲಾಗಿದೆ:

(೧) ಚಿಕ್ಕ ಮಕ್ಕಳಿಗೆ ಮತ್ತು ಬರಹ ಬಾರದ ದೊಡ್ಡವರಿಗೆ ಕನ್ನಡ ಬರಹವನ್ನು ಕಲಿಸುವ ಕೆಲಸ ಸುಲಬವಾಗುತ್ತದೆ. ಅವರಿಗೆ ೫೦ ಅಕ್ಕರಗಳ ಬದಲು ಬರೇ ೩೧ ಅಕ್ಕರಗಳನ್ನು ಕಲಿಸಿದರೆ ಸಾಕು. ಇವನ್ನೆಲ್ಲ ಓದುವ ಹಾಗೆಯೇ ಬರೆಯುವ ಕಾರಣ, ಕಲಿಯುವುದೂ ಸುಲಬ.

(೨) ಎಲ್ಲಾ ಪದಗಳನ್ನೂ ಓದುವ ಹಾಗೆಯೇ ಬರೆಯುವ ಕಾರಣ, ಇವತ್ತು ಕನ್ನಡದಲ್ಲಿರುವ ಸ್ಪೆಲ್ಲಿಂಗ್ ಸಮಸ್ಯೆ ಪೂರ‍್ತಿ ಇಲ್ಲವಾಗುತ್ತದೆ.

(೩) ಇವತ್ತು ಕನ್ನಡದ ದಿನಪತ್ರಿಕೆಗಳಲ್ಲಿ ಮತ್ತು ಕತೆಕಾದಂಬರಿಗಳಲ್ಲಿ ತುಂಬಾ ಹೆಚ್ಚು ಅಚ್ಚಿನ ತಪ್ಪುಗಳು ಕಾಣಿಸುವುದು ಮಹಾಪ್ರಾಣ ಬರಿಗೆಗಳು, ಷಕಾರ, ಮತ್ತು

ಋಕಾರಗಳ ಬಳಕೆಯಲ್ಲಿ. ಮೇಲಿನ ಮಾರ್ಪಾಡನ್ನು ಮಾಡಿಕೊಂಡಲ್ಲಿ, ಈ ತಪ್ಪುಗಳೆಲ್ಲವೂ ಇಲ್ಲವಾಗುತ್ತವೆ. (ಹಲವು ಜನರಿಗೆ ಹಕಾರದ ಇಲ್ಲವೇ ಶಕಾರದ ಬಳಕೆಯೂ ತೊಂದರೆಯದಾಗಿ ಕಾಣಿಸುತ್ತದೆ; ಆದರೆ ಸದ್ಯಕ್ಕಂತೂ ಆ ವಿಶಯದಲ್ಲಿ ನಾವೇನೂ ಮಾಡಲಾರೆವು).

(೪) ಬರಹಗಾರರಿಗೆ ಎಲ್ಲಿ ಯಾವ ಬರಿಗೆಯನ್ನು ಬಳಸಬೇಕು ಎಂಬ ವಿಶಯದಲ್ಲಿ ಸಂಶಯವೇಳುವುದು ಮೇಲಿನ ಬರಿಗೆಗಳ ಬಳಕೆಯಲ್ಲಿ ಮಾತ್ರ. ಅವನ್ನು ಓದುವ ಹಾಗೆ ಬರೆಯದಿರುವುದೇ ಇದಕ್ಕೆ ಕಾರಣ. ಮೇಲಿನ ಮಾರ್ಪಾಡಿನಿಂದ ಈ ಸಂಶಯಗಳೆಲ್ಲ ಇಲ್ಲವಾಗುತ್ತವೆ.

(೫) ಕೆಳವರ್ಗದ ಮಕ್ಕಳಿಗೆ ಉಲಿಪಿನಲ್ಲಿಲ್ಲದ ಈ ಹೆಚ್ಚಿನ ಬರಿಗೆಗಳನ್ನು ಕಲಿಯಲು ತುಂಬಾ ಕಶ್ಟವೆಂದೆನಿಸುವ ಕಾರಣ, ಅವರಲ್ಲಿ ಕೀಳರಿಮೆಯುಂಟಾಗುತ್ತದೆ ಮತ್ತು ಕಲಿಸುವವರೂ ಅವರಲ್ಲಿ ಕೀಳರಿಮೆಯುಂಟಾಗುವ ಹಾಗೆ ಮಾಡುತ್ತಾರೆ. ಇದರಿಂದಾಗಿ, ಅವರು ತಮ್ಮ ಕಲಿಕೆಯನ್ನು ಅರ್ದದಲ್ಲೇ ಬಿಟ್ಟು ಬಿಡುತ್ತಾರೆ.

ಮೇಲಿನ ಮಾರ್ಪಾಡನ್ನು ನಡೆಸಿದಲ್ಲಿ ಈ ತೊಂದರೆ ಇಲ್ಲವಾಗುತ್ತದೆ ಮತ್ತು ಕೆಳವರ್ಗದ ಮಕ್ಕಳಿಗೆ ಅಶ್ಟರ ಮಟ್ಟಿಗೆ ಸಾಮಾಜಿಕ ನ್ಯಾಯ ದೊರಕುತ್ತದೆ.

(೬) ಈ ಮಾರ್ಪಾಡನ್ನು ನಡೆಸಿದಲ್ಲಿ ಬೆರಳಚ್ಚು ಮಾಡುವುದು ಮತ್ತು ಕಂಪ್ಯೂಟರಿನಲ್ಲಿ ಬರೆಯುವುದು ಸುಲಬ; ಶಿಫ್ಟ್ ಕೀಯನ್ನು ತುಂಬಾ ಕಡಿಮೆ ಬಾರಿ ಒತ್ತಬೇಕಾಗುತ್ತದೆ.

(೭) ಪದಗಳನ್ನು ಓದುವ ಹಾಗೆಯೇ ಬರೆಯುವ ಕಾರಣ, ಬರಹಕ್ಕೂ ಆಡುಮಾತಿಗೂ ನಡುವಿರುವ ಅಂತರ ಕಡಿಮೆ ಯಾಗುತ್ತದೆ.

(೮) ಬರಹದ ತೊಡಕುಗಳು ಮತ್ತು ಕ್ರುತಕತೆಗಳು ಕಡಿಮೆಯಾಗುತ್ತವೆ ಮತ್ತು ಇದರಿಂದಾಗಿ ಬರಹ ಹೆಚ್ಚು ಜೀವಂತವಾಗಿ ಕಾಣಿಸುತ್ತದೆ.

ಮೇಲಿನ ಬದಲಾವಣೆಯನ್ನು ಮಾಡದಿರುವುದರಿಂದ ನಾವು ಪಡೆಯಬಹುದಾದ ಪ್ರಯೋಜನಗಳು ನನ್ನ ಅನಿಸಿಕೆಯಂತೆ ಕೆಳಗಿನವು ಮಾತ್ರ :

(೧) ಸಂಸ್ಕ್ರುತದ ಮೇಲೆ ಹೆಚ್ಚಿನ ಅಬಿಮಾನ ಮತ್ತು ಪೂಜ್ಯಬಾವವಿರುವ ಕೆಲವು ಮಂದಿ ವಿದ್ವಾಂಸರಿಗೆ ಸಂತೋಶ ವಾಗಬಹುದು.

(೨) ಬದಲಾವಣೆಗಳಿಂದ ದೂರ ನಿಲ್ಲುವ ಸೋಮಾರಿಗಳಿಗೂ ಸಂತೋಶವಾಗಬಹುದು.

ಆದರೆ ಇಶ್ಟಕ್ಕಾಗಿ ಮೇಲೆ ಸೂಚಿಸಿದ ಹಲವು ಪ್ರಯೋಜನ ಗಳನ್ನು ನಾವು ಬಿಟ್ಟುಕೊಡಬೇಕೇನು?

## ನಾವು ಹೊರತಂದ ಬೇರೆ ಕೆಲವು ಪುಸ್ತಕಗಳು

**ಡಿ.ಎನ್.ಶಂಕರ ಬಟ್ ಬರೆದ ಪುಸ್ತಕಗಳು:**

೧. ಕನ್ನಡ ಬರಹದ ಸೊಲ್ಲರಿಮೆ-೧, ೨೦೧೦, ೨೦೧೩, ಪುಟ ೩೨೮, ರೂ. ೨೨೦.

೨. ಕನ್ನಡ ಬರಹದ ಸೊಲ್ಲರಿಮೆ-೨, ೨೦೧೧, ಪುಟ ೩೧೨, ರೂ. ೨೦೦.

೩. ಕನ್ನಡ ಬರಹದ ಸೊಲ್ಲರಿಮೆ-೩, ೨೦೧೨, ಪುಟ ೩೬೦, ರೂ. ೨೪೦.

೪. ಕನ್ನಡ ಬರಹದ ಸೊಲ್ಲರಿಮೆ-೪, ೨೦೧೩, ಪುಟ ೩೨೦, ರೂ. ೨೨೦

೫. ಕನ್ನಡ ಬರಹದ ಸೊಲ್ಲರಿಮೆ-೫, ೨೦೧೫, ಪುಟ ೩೧೪, ರೂ. ೨೪೦

೬. ಕನ್ನಡದಲ್ಲೇ ಹೊಸಪದಗಳನ್ನು ಕಟ್ಟುವ ಬಗೆ, ೨೦೧೪, ಪುಟ ೨೪೮, ರೂ. ೧೯೦.

೭. ಕನ್ನಡ ನುಡಿಯರಿಮೆಯ ಇಣುಕುನೋಟ, ೨೦೧೩, ಪುಟ ೧೨೪, ರೂ. ೧೦೦.

೮. ಮಾತು ಮತ್ತು ಬರಹದ ನಡುವಿನ ಗೊಂದಲ, ೨೦೧೨, ೨೦೧೫, ಪುಟ ೨೧೬, ರೂ. ೧೫೦.

೯. ಕನ್ನಡ ವ್ಯಾಕರಣ ಯಾಕೆ ಬೇಕು?, ೨೦೦೯, ೨೦೧೫, ಪುಟ ೨೬೦, ರೂ. ೧೬೦.

೧೦. ಇಂಗ್ಲಿಶ್ ಪದಗಳಿಗೆ ಕನ್ನಡದ್ದೇ ಪದಗಳು, ೨೦೦೮, ೨೦೧೧, ೩೩೬ ಪುಟ ರೂ. ೨೦೦

೧೧. ಮಾತಿನ ಒಳಗುಟ್ಟು, ೨೦೦೮, ೨೦೧೩, ಪುಟ ೨೦೮, ರೂ ೧೫೦.

೧೨. ಕನ್ನಡ ನುಡಿ ನಡೆದು ಬಂದ ದಾರಿ, ೨೦೦೭, ೨೦೦೯, ೨೦೧೪, ಪುಟ ೩೪೮, ರೂ ೧೯೦.

೧೩. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ೨೦೦೦, ೨೦೦೧, ೨೦೦೬, ೨೦೦೮, ೨೦೦೯, ೨೦೧೧, ೨೦೧೪, ೨೦೧೫, ಪು.

೨೪೮, ರೂ. ೧೫೦.

೧೪. ಕನ್ನಡ ಪದಗಳ ಒಳರಚನೆ, ೧೯೯೯; ೨೦೦೨, ೨೦೧೦, ೨೦೧೪, ಪುಟ ೨೩೯, ರೂ. ೧೬೦.

೧೫. ಬಾಶೆಯ ಬಗೆಗೆ ನೀವೇನು ಬಲ್ಲಿರಿ?, ೧೯೭೦, ೧೯೯೮, ೨೦೦೨, ೨೦೧೦, ೨೦೧೩, ಪು. ೧೯೧, ರೂ. ೧೪೦.

೧೬. ಕನ್ನಡ ವಾಕ್ಯಗಳ ಒಳರಚನೆ, ೨೦೦೪, ೨೦೦೬, ೨೦೧೨, ೨೦೧೬, ಪುಟ ೨೮೦, ರೂ. ೧೮೦.

೧೭. ಕನ್ನಡ ಬರಹವನ್ನು ಸರಿಪಡಿಸೋಣ, ೨೦೦೬, ೨೦೦೯, ಪು. ೩೦೪, ರೂ. ೧೬೦.

೧೮. ಹವ್ಯಕ ಕನ್ನಡ, ೨೦೧೭, ಪು. ೧೮೪, ರೂ. ೧೫೦.

೧೯. ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು? ೨೦೦೫. ಮರುಅಚ್ಚು: **ರವೀಂದ್ರ ಪುಸ್ತಕಾಲಯ, ಸಾಗರ,** ೫೭೭ ೪೦೧, ೨೦೧೫, ಪುಟ ೨೧೯, ರೂ. ೨೦೦.

**ಅರಿಮೆಯ ಚುಟುಕು ಕಡತಗಳು:**

೧. ಕನ್ನಡದ ಸೊಲ್ಲರಿಮೆ, ೨೦೧೬, ಪುಟ.೧೦೮, ರೂ. ೫೦.

೨. ಕನ್ನಡ ನುಡಿಯ ಹಿನ್ನಡವಳಿ, ೨೦೧೬, ಪುಟ ೯೫, ರೂ. ೫೦.

**ಬಾರತಿ ಬಟ್ ಬರೆದ ಪುಸ್ತಕಗಳು:**

೧. ನನ್ನ ಬೆಲ್ಜಿಯಂ ಪ್ರವಾಸ, ೨೦೦೦, ಪುಟ ೧೬೦, ರೂ. ೫೦.

೨. ತಾಯಂದಿರಿಗೆ ಕಿವಿಮಾತು, ೨೦೦೭, ಪುಟ ೨೨೪, ರೂ. ೧೨೦.

೩. ಮನೆಗೆಲಸದ ಕಯ್ಪಿಡಿ, ೨೦೧೬, ಪುಟ ೨೮೮, ರೂ. ೨೭೫.



ಕನ್ನಡ ಬರಹಗಳಲ್ಲಿ ಸಂಸ್ಕ್ರುತದ ಎರವಲು ಪದಗಳನ್ನು ಸಂಸ್ಕ್ರುತದಲ್ಲಿರುವ ಹಾಗೆಯೇ ಬರೆಯುವುದಕ್ಕಾಗಿ ಮಹಪ್ರಾಣ ಬರಿಗೆ(ಅಕ್ಶರ)ಗಳು, ಷಕಾರ, ಋಕಾರ, ವಿಸರ್‍ಗ ಮೊದಲಾದ ಹತ್ತಿಪ್ಪತ್ತು ಹೆಚ್ಚಿನ ಬರಿಗೆಗಳನ್ನು ಬಳಸಲಾಗುತ್ತದೆ. ಕನ್ನಡದವೇ ಆದ ಪದಗಳನ್ನು ಬರೆಯಲು ಇವು ಬೇಕಾಗುವುದಿಲ್ಲ.

ಬೇರೆಲ್ಲಾ ಎರವಲು ಪದಗಳನ್ನೂ ಅವನ್ನು ಹೇಗೆ ಉಲಿಯುತ್ತೇವೋ ಹಾಗೆ ಬರೆಯುತ್ತೇವೆ. ಸಂಸ್ಕ್ರುತದ ಎರವಲು ಪದಗಳನ್ನು ಮಾತ್ರ ಉಲಿಯುವ ಹಾಗೆ ಬರೆಯದೆ, ಸಂಸ್ಕ್ರುತದಲ್ಲಿರುವ ಹಾಗೆ ಬರೆಯುತ್ತೇವೆ.

ನಿಜಕ್ಕೂ ಕನ್ನಡದ ಮಟ್ಟಿಗೆ ಇದು ಅವಶ್ಯವಿಲ್ಲ. ಈ ಹೆಚ್ಚಿನ ಬರಿಗೆಗಳು ಕನ್ನಡ ಬರವಣಿಗೆಯನ್ನು ಕಲಿಯುವ ಮಕ್ಕಳಿಗೆ ಮತ್ತು ಆಮೇಲೆ ಅದನ್ನು ಬಳಸುವ ದೊಡ್ಡವರಿಗೆ ಅನವಶ್ಯಕವಾಗಿ ತೊಂದರೆ ಕೊಡುತ್ತಿವೆ.

ಮೇಲ್ವರ್‍ಗದ ಮಕ್ಕಳಿಗಿಂತಲೂ ಕೆಳವರ್‍ಗದ ಮಕ್ಕಳಿಗೆ ಅವು ಹೆಚ್ಚು ತೊಂದರೆ ಕೊಡುತ್ತಿವೆ. ಅವುಗಳಿಂದಾಗಿ ಹೆಚ್ಚಿನ ಕೆಳವರ್‍ಗದ ಮಕ್ಕಳೂ ಬರಹದಿಂದ ದೂರ ಉಳಿಯುವಂತಾಗಿದೆ.

ಈ ತೊಡಕನ್ನು ಹೋಗಲಾಡಿಸಲು, ಮತ್ತು ಕೆಳವರ್‍ಗದ ಮಕ್ಕಳಿಗೆ ಸಾಮಾಜಿಕ ನ್ಯಾಯ ಒದಗಿಸಲು ಬೇರೆ ಎರವಲು ಪದಗಳ ಹಾಗೆ ಸಂಸ್ಕ್ರುತ ಎರವಲು ಪದಗಳನ್ನೂ ಉಲಿಯುವ ಹಾಗೆ ಬರೆಯಲು ತೊಡಗಬೇಕು, ಮತ್ತು ಕನ್ನಡ ಬರವಣಿಗೆಯಲ್ಲಿ ಈ ಹತ್ತಿಪ್ಪತ್ತು ಹೆಚ್ಚಿನ ಬರಿಗೆಗಳನ್ನು ಬಳಸದಿರಬೇಕು.

ರೂ. 50

ಪ್ರತಿಗಳಿಗೆ ಬರೆಯಿರಿ:

**ನವಕರ್ನಾಟಕ ಪ್ರಕಾಶನ**

11 ಕ್ರೆಸೆಂಟ್ ರಸ್ತೆ, ಕೆ.ಪಿ. ಈಸ್ಟ್, ಬೆಂಗಳೂರು-560 001.

ದೂರವಾಣಿ: 22203580/81/82